ನಮ್ಮ ಮಾನಸಿ

ಜೂನ್ 2007

ಸಂಪುಟ : 1 ಸಂಚಿಕೆ : 2



ಸೂಚನೆ :

| | |
|---|---|
| ಬಿಡಿಪ್ರತಿ | 10–00 ರೂ. |
| ವಾರ್ಷಿಕ ಚಂದಾ | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ





ನಮ್ಮ ಮಾನಸಿ
114/5, 9ನೇ ತಿರುವು, 2ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು – 560 018

ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು

ಕಛೇರಿ ವಿಳಾಸ :
34/1, 2ನೇ ಕ್ರಾಸ್
ಆಜಾದ್ ನಗರ, ಚಾಮರಾಜಪೇಟೆ
ಬೆಂಗಳೂರು – 560 018



ಸಂಪಾದಕೀಯ

# ಕಾನೂನು ತಿದ್ದುಪಡಿ ಆಗಿದೆಯೆ ? ಸರಿಯಾಗಿದೆಯೆ?

ಅನೇಕ ಸಂಗತಿಗಳಿಗೆ 'ಇದು ಸಮರ್ಪಕವಿಲ್ಲ, ಸರಿಪಡಿಸಿ' ಎಂದು ಹೋರಾಟ ಮಾಡಲಾಗುತ್ತದೆ. ಬಹು ಪ್ರಯಾಸದಿಂದಲೇ ಬೇಡಿಕೆಗಳಿಗೆ ಒಪ್ಪಿಗೆಯೂ ದೊರೆಯುತ್ತದೆ. ಒಂದು ಬಿಡುಗಡೆಯ ನಿಟ್ಟುಸಿರು ! ಅನಂತರ ಆ ಸಂಗತಿಯನ್ನೇ ಮರೆತುಬಿಡುತ್ತೇವೆ. ವ್ಯವಸ್ಥೆ-ಅಧಿಕಾರಶಾಹಿ ಆ ಕ್ಷಣಕ್ಕೆ ತಪ್ಪಿಸಿಕೊಂಡಿತು. ಆದರೆ ಅಧಿಕೃತವಾಗಿ ಆ ಸಂಬಂಧದ ನಿಯಮಾವಳಿಗಳನ್ನು ಸರಿಯಾಗಿ ತಿದ್ದಿ ಸರಿಪಡಿಸಲಾಯಿತೇ ಎಂಬುದನ್ನು ಪರಿಶೀಲಿಸಿ ಖಚಿತಪಡಿಸಿಕೊಳ್ಳುವತ್ತ ನಾವು ಗಮನ ಕೊಡುವುದಿಲ್ಲ. ಇದೇ ರೀತಿ ಎಂದೋ ರಚಿತವಾದ ಕಾನೂನುಬದ್ಧ ಅನ್ನಿಸಿಕೊಂಡ ಅನೇಕ ನಿಯಮಗಳು ಹಾಗೇ ಜಾರಿಯಲ್ಲಿರಬಹುದು. ಅವುಗಳ ಔಚಿತ್ಯವನ್ನು ಅಭ್ಯಾಸ ಮಾಡಿ ಎಚ್ಚರಿಸುವತ್ತಲೂ ನಾವು ಗಮನಹರಿಸುವುದಿಲ್ಲ. ಆಪತ್ತೆಂಬ ರಣಹದ್ದು ತಲೆಯಮೇಲೆ ಹಾರಾಡುವಾಗಲೇ ಅತ್ತ ಗಮನ ಹರಿಸುತ್ತೇವೆ. ಈಚೆಗೆ ನಡೆದ ವಿವಾದ ಒಂದು ಪ್ರಹಸನದಂತೆ ನಡೆದು, ಅಂತೂ ಮುಕ್ತಾಯದ ಘಟ್ಟಕ್ಕೆ ಬಂದಿತು.

ಮಹಿಳಾ ಮತ್ತು ಮಕ್ಕಳ ತಜ್ಞರ ಸಮಿತಿಯೊಂದು ಎತ್ತಿದ ಪ್ರಶ್ನೆ, ಮಂಡಿಸಿದ ಶಿಫಾರಸಿನ ಹಿನ್ನೆಲೆಯಲ್ಲಿ ಸುಮಾರು 46 ವರ್ಷಗಳಿಂದ ಜಾರಿಯಲ್ಲಿತ್ತೆನ್ನಲಾದ ಮಹಿಳಾ ನೌಕರರ 'ರಾತ್ರಿ ಪಾಳಿ ನಿಷೇಧ ಕಾಯ್ದೆ'ಯ ಸಂಗತಿಗೆ ಮತ್ತೆ ಜೀವ ಬಂದಿತು. ಪ್ರಾಯಃ ಸ್ತ್ರೀಸ್ವಾತಂತ್ರ್ಯ, ಆರ್ಥಿಕ ಸ್ವಾವಲಂಬನೆ-ಸಮಾನತೆಯನ್ನು ಒಪ್ಪಿಕೊಳ್ಳದ, ಅವರನ್ನು ಸದಾ ನಿರ್ಬಂಧದಲ್ಲೇ ಇಡುವ ಮನೋಧರ್ಮದವರೆನ್ನಿಸುವ ಸಂಬಂಧಿಸಿದ ಮಂತ್ರಿಗಳು ಕೂಡಲೇ ಒಂದು ಫರ್ಮಾನು ಹೊರಡಿಸಿಬಿಟ್ಟರು.

1961ರ ಕಾಯ್ದೆಯ 30ನೇ ನಿಯಮದ ಮೂರನೇ ಉಪವಿಭಾಗದ 25ನೆ ಕಲಮಿನಲ್ಲಿ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳಲ್ಲಿ ರಾತ್ರಿ 8 ಗಂಟೆಯಿಂದ ಬೆಳಗಿನ 6 ಗಂಟೆಯವರೆಗೆ ಮಹಿಳೆಯರು ಕೆಲಸ ಮಾಡುವುದಕ್ಕೆ ನಿಷೇಧ ವಿಧಿಸಲಾಗಿತ್ತು. ಆ ಕಾಯ್ದೆ ಅನುಷ್ಠಾನಕ್ಕೆ ಬಂದದ್ದು ಕಡಿಮೆ. ಆ ಕಾನೂನು ಬಂದಾಗಲೂ ಪ್ರತಿಭಟನೆ-ವಿರೋಧಗಳು ಎದ್ದಿದ್ದವು. ಈ ಆಧುನಿಕ ಯುಗದಲ್ಲಿ ಆ ಕಾಯ್ದೆ ಅರ್ಥ ಕಳೆದುಕೊಳ್ಳುತ್ತದೆ; ಹೋರಾಡಿಯೇ ಪಡೆದುಕೊಂಡ ಸಮಾನತೆಯನ್ನು ಕಿತ್ತುಕೊಳ್ಳುತ್ತದೆ. ಆದರೆ ಮಾನ್ಯ ಮಂತ್ರಿಗಳಿಗೆ ಇದಾವುದೂ ಮುಖ್ಯವಾಗಲಿಲ್ಲ. ಮಹಿಳೆಯರ ಬಗ್ಗೆ ಸಹಾನುಭೂತಿ ಎಂಬಂತೆ ತೋರುವ 'ಇನ್ನು ಮುಂದೆ ರಾತ್ರಿ ವೇಳೆ ಮಹಿಳೆಯರು ದುಡಿಯುವಂತಿಲ್ಲ. ಹಾಗೆ ದುಡಿಸಿಕೊಳ್ಳುವುದು ಅಪರಾಧ ಮತ್ತು ಅಂಥ ಸಂಸ್ಥೆಗಳಿಗೆ ದಂಡ-ಶಿಕ್ಷೆ ವಿಧಿಸಲಾಗುವುದು' ಎಂದು ಕಟ್ಟಪ್ಪಣೆ ಮಾಡಿದರು. ಇಂಥದೊಂದು ಮಹಿಳಾಪರ ನಿಯಮ ಜಾರಿಮಾಡಿದ ಮೊದಲ ರಾಜ್ಯ ತಮ್ಮದೆಂದು ಬೀಗಿದ್ದೂ ಆಯಿತು. ರಾಷ್ಟ್ರಮಟ್ಟದಲ್ಲಿ ಈ ಸುದ್ದಿ ಹರಡಿತು, ಚರ್ಚೆಗಳಾದವು. ಬೇರೆ ಬೇರೆ ದಿಕ್ಕಿನಿಂದ ಒತ್ತಡಗಳು ಬಂದಮೇಲೆ ಬಹಳ ಜಾಣತನದಿಂದ ಕೆಲವು ಸಂಸ್ಥೆಗಳಿಗೆ ಈ ನಿಷೇಧದಿಂದ ವಿನಾಯಿತಿ ನೀಡಲಾಯಿತು. ಆಸ್ಪತ್ರೆ ಮೊದಲಾದ ಸೇವಾಕ್ಷೇತ್ರಗಳು ಮತ್ತು ಬಹಳ ಮುಖ್ಯವಾಗಿ ಬಹು ಆದಾಯದ 'ಪ್ರತಿಷ್ಠಿತ' ಸಂಸ್ಥೆಗಳಾದ ಐ.ಟಿ., ಬಿ.ಟಿ.ಗಳಲ್ಲಿ ರಾತ್ರಿಪಾಳಿಗೆ ಅಡ್ಡಿಇಲ್ಲ ಎಂದಿತು. ಅವೂ 'ಪರ'ಸೇವೆಯಲ್ಲಿ ನಿರತವಲ್ಲವೆ!

ಮಹಿಳೆಗೆ ಸಮಾನ ಹಕ್ಕುಗಳನ್ನು ನೀಡುವ ಹಿನ್ನೆಲೆಯಲ್ಲಿ, ಬಹಳ ಹಿಂದೆಯೇ ಅಂತಾರಾಷ್ಟ್ರೀಯ ನಿರ್ಣಯಗಳು ಹಾಗೂ ಮಾನವ ಹಕ್ಕುಗಳ ಒಡಂಬಡಿಕೆಯು ಮಹಿಳೆಯ ವಿರುದ್ಧದ ಎಲ್ಲ ತರತಮಗಳನ್ನು ನಿವಾರಿಸುವ ನಿರ್ಣಯ (ಸೀಡಾ)ವನ್ನು ತೆಗೆದುಕೊಂಡಿದೆ. 1993ರಲ್ಲೇ ಈ ನಿರ್ಣಯವನ್ನು ಭಾರತವೂ ಒಪ್ಪಿ ಸಹಿಹಾಕಿದೆ. ಮಹಿಳೆಯರ ಸಾಮರ್ಥ್ಯದ ಸಂಪೂರ್ಣ ಬಳಕೆ ಮತ್ತು ಆಕೆಯ ಅಭಿವೃದ್ಧಿಗಾಗಿ ಅಗತ್ಯವಿರುವ ಆರ್ಥಿಕ, ಸಾಮಾಜಿಕ ನೀತಿಗಳನ್ನು ರೂಪಿಸಿ, ಸಬಲೀಕರಣಕ್ಕೆ ಪೂರಕ ವಾತಾವರಣ ನಿರ್ಮಿಸಬೇಕಾದ್ದು ಸರ್ಕಾರದ ಕರ್ತವ್ಯ. ಆದರೆ ಕರ್ನಾಟಕ ರಾಜ್ಯ ಸಬಲೀಕರಣದ ಕುರಿತು ವೇದಿಕೆಗಳಲ್ಲಿ ಬಡಬಡಿಸುತ್ತಲೇ ಇರುತ್ತದೆ. ಒಬ್ಬ ಮಹಿಳೆಯ ಪ್ರಾತಿನಿಧ್ಯವೂ ಇಲ್ಲದ ಮಂತ್ರಿಮಂಡಲವನ್ನು ರಚಿಸಿಕೊಂಡಿದೆ; ವಿವಾದಗಳೆದ್ದಾಗೆಲ್ಲ ಪೌರುಷ ಮೆರೆಯಲು 'ನಾನು ಬಳೆ ತೊಟ್ಟು ಕೊಂಡಿಲ್ಲ' ಎಂದು ಹೂಂಕರಿಸುವ ಮುಖ್ಯಮಂತ್ರಿಗಳಿದ್ದಾರೆ. ಇಂಥವರಿಂದ ನಿರ್ಬಂಧಕ್ಕಿಂತ ಬೇರೆಯಾದ, ಸಬಲೀಕರಣ-ಸಮಾನತೆಯ ಕನಸನ್ನೂ ಕಾಣಲಾರೆವು.

ದಿಢೀರನೇ ಹೊರಟ ರಾತ್ರಿಪಾಳಿ ನಿಷೇಧ, ಕೆಲವರಿಗೆ ರಿಯಾಯಿತಿ ಎಂಬ ಫರ್ಮಾನು ಮಹಿಳೆಯರಲ್ಲಿ ಆತಂಕ ಹುಟ್ಟಿಸಿತು.

ಅಪಾಯ ಎಂಥದೆಂಬ ಅರಿವಿಲ್ಲದ, ದೂರದೃಷ್ಟಿ ಇಲ್ಲದ, ಕೆಲವರು ಈ ನಿಯಮವನ್ನು ಸ್ವಾಗತಿಸಿದ್ದೂ ಉಂಟು. ಈ ಸ್ವಾಗತದ ಹಿಂದೆ ರಾತ್ರಿಪಾಳಿಯಲ್ಲಿ ದುಡಿಯಲಾರೆನೆಂಬುದಕ್ಕಿಂತ ಅಸುರಕ್ಷತೆಯ ಆತಂಕ ಇತ್ತು. ಆದರೆ ದುಡಿಯುವ ಮಹಿಳೆಯರ ಮಧ್ಯೆ ತಾರತಮ್ಯ, ಒಡೆದಾಳುವ ಪರಿ, ಕಷ್ಟಪಟ್ಟು ಗಳಿಸಿದ ತುತ್ತು ಅನ್ನಕ್ಕೂ ಸಂಚಕಾರ ತರುವ ಪ್ರಯತ್ನ ಇದು ಎಂಬುದನ್ನು ಗ್ರಹಿಸಿದ ಮೇಲೆ ಎಲ್ಲ ದನಿಗಳೂ ಒಟ್ಟಾದವು. ಮಹಿಳಾ ಸಂಘಟನೆಗಳು, ಚಿಂತಕಿಯರು ಗಟ್ಟಿಯಾದ ದನಿಯಲ್ಲಿ ವಿರೋಧಿಸಿದರು. ಕಾನೂನು ಮಂತ್ರಿಗಳಿಗೆ ಪೇಚಾಟಕ್ಕಿಟ್ಟುಕೊಂಡಿತು.

ರಾಜ್ಯದಲ್ಲಿ ದರೋಡೆ, ಅತ್ಯಾಚಾರ, ಕೊಲೆ ನಿತ್ಯನೋಟವಾಗುತ್ತಿದೆ. ಮೊದಲ ಬಲಿ ಹೆಣ್ಣುಮಗಳು ಎಂಬುದೂ ನಿಜ. ಆದರೆ ಈ ಅರಾಜಕತೆಗೆ ಕಾರಣವೂ ಆಳುವವರೇ ಆಗಿರುತ್ತಾರೆ. ದುಷ್ಟತನವನ್ನು ನಿಯಂತ್ರಣಕ್ಕೆ ತರುವುದು, ಜನರಿಗೆ ರಕ್ಷಣೆ ಒದಗಿಸುವುದು ಅವರ ಕರ್ತವ್ಯ. ಮಹಿಳೆಯರಿಗೆ ಸುರಕ್ಷತೆ ಒದಗಿಸಲಾಗದ ಅಸಹಾಯಕರಿಗೆ ಅದು ತಮ್ಮ ದೌರ್ಬಲ್ಯ ಎಂಬುದು ಅರ್ಥವಾಗಬೇಕಿತ್ತು. ಯಾರೂ ನೆಗಡಿಯಾದರೆ ಮೂಗೇ ಕುಯ್ಯುವುದಿಲ್ಲ. ಆದರೆ ನಮ್ಮ ಕಾನೂನು ಮಂತ್ರಿಗಳು ಮಾಡಿದ್ದು ಈ ಮೂಗು ಕುಯ್ಯುವ ಕೆಲಸವನ್ನು! ಯಾವುದೇ ದುಡಿಮೆ-ಗಳಿಕೆಯಲ್ಲಿ ರಾಜ್ಯದ ಪಾಲೂ ತೆರಿಗೆ ಇತ್ಯಾದಿ ರೂಪದಲ್ಲಿ ಸಂದಾಯವಾಗುತ್ತಿರುತ್ತದೆ. ದುಡಿಯುವ ಕೈ ಗಂಡಾಗಲೀ ಹೆಣ್ಣಾಗಲೀ ರಕ್ಷಣೆ ಕೊಡುವುದು ದುಡಿಸಿಕೊಳ್ಳುವವರ ಮತ್ತು ಸರ್ಕಾರದ ಕರ್ತವ್ಯ. ಇಂಥ ಕರ್ತವ್ಯವನ್ನೇ ಮರೆತು, ರಾತ್ರಿ ಕೆಲಸಕ್ಕೇ ಹೋಗಬೇಡಿ ಅಂದು ತಮ್ಮ ರಕ್ಷಣೆ ಕೊಡಲಾಗದ ಅಸಾಮರ್ಥ್ಯವನ್ನೇ ಮೆರೆದರು. ಲೋಹಿಯಾವಾದಿ, ಪ್ರಗತಿಪರ ಚಿಂತಕ ಗೃಹಮಂತ್ರಿಗಳದೂ ದಿವ್ಯಮೌನ!

ಆದರೆ ಸಕಾಲಿಕ ಎಚ್ಚರ, ಹೋರಾಟ ಸರ್ಕಾರವನ್ನು ಮಣಿಸಿದೆ. ಕಾನೂನಿಗೆ ತಿದ್ದುಪಡಿ ಮಾಡಿ 'ರಾತ್ರಿಪಾಳಿ ನಿಷೇಧ'ದ ಮಾತನ್ನೇ ಕಿತ್ತು ಹಾಕುತ್ತೇವೆಂದಿದ್ದಾರೆ. ಒಳಿತೇ. ಆದರೆ ಈ ತಿದ್ದುಪಡಿ ಸರಿಯಾಗಿ ಆಗುತ್ತದೆಯೆ? ಕೇವಲ ಬೀಸುವ ದೊಣ್ಣೆ ತಪ್ಪಿಸಿಕೊಂಡರೆ? ಸಂಬಂಧಪಟ್ಟವರು ಅಥವಾ ಮಹಿಳಾ ಆಯೋಗದಂಥ ಅಧಿಕೃತ ಸಂಸ್ಥೆಗಳು ಈ ತಿದ್ದುಪಡಿಯನ್ನು ಎಚ್ಚರದಿಂದ ನೋಡಿ ಖಚಿತಪಡಿಸಿಕೊಳ್ಳಬೇಕಿದೆ. ಎಲ್ಲ ಕಾನೂನು ನಿಯಮಗಳ ರಚನೆಯ ಹಂತದಲ್ಲೇ ಮಹಿಳಾ ವಿರೋಧಿ ಸಂಚೊಂದು ತೂರಿಕೊಂಡುಬಿಡುವ ಸಂಭವವಿದೆ. ಮೈಯೆಲ್ಲ ಕಣ್ಣಾಗಿ ಎಲ್ಲವನ್ನೂ ಗಮನಿಸುತ್ತ, ಸಕಾಲದಲ್ಲಿ ಎಚ್ಚರಿಸುತ್ತ, ಅಗತ್ಯವಿದ್ದಲ್ಲೆಲ್ಲ ಹೋರಾಟದ ಕಣಕ್ಕಿಳಿಯುತ್ತ ಮುನ್ನುಗ್ಗಬೇಕಾಗಿದೆ. ಎಲ್ಲ ಮಹಿಳೆಯರಿಗೂ ಅಜ್ಞಾತುರ್ಯಗಳಾಗದಂತೆ ಕಾವಲು ಕಾಯುವ ಅನಿವಾರ್ಯಗಳು ಎದುರಿಗಿವೆ. ಇದಕ್ಕಾಗಿ ಶಕ್ತಿ ಸಂಚಯನವಾಗಲಿ; ಎಲ್ಲ ದಿಕ್ಕಿನಿಂದ ಸಂಘಟಿಸುವ ಪ್ರಯತ್ನಗಳಾಗಲಿ.

* * *

**'ನಮ್ಮ ಮಾನಸ'**ದ ಎರಡನೆಯ ಸಂಚಿಕೆ ನಿಮ್ಮ ಕೈಯಲ್ಲಿದೆ. ಮರುಹುಟ್ಟು ಪಡೆದ ಪತ್ರಿಕೆಗೆ ತಾವು ತೋರಿದ ಬೆಂಬಲ ದೊಡ್ಡದು. ಪತ್ರ ಬರೆದು, ಚಂದಾ ಕಳಿಸಿ, ಹಾರೈಸಿದವರಿಗೆ ಮತ್ತು ಲೇಖನಗಳನ್ನು ಕಳಿಸಿದವರಿಗೆ ನಾವು ಕೃತಜ್ಞರು. ಅಂಚೆ ಇಲಾಖೆ ಗೊತ್ತುಪಡಿಸಿರುವಂತೆ ಪ್ರತಿತಿಂಗಳೂ ತಾ. 9ರಂದು ಪತ್ರಿಕೆ ಅಂಚೆಗೆ ಹೋಗುತ್ತದೆ. ಆದರೆ ಬೆಂಗಳೂರಿನ ಓದುಗರಿಗೆ ತುಂಬ ತಡವಾಗಿ ತಲುಪುತ್ತಿದೆ. ಕೆಲವರಿಗೆ ಇನ್ನೂ ತಲುಪಿಯೇ ಇಲ್ಲ! ಈ ವಿಷಯದಲ್ಲಿ ನಾವು ಅಸಹಾಯಕರಾಗಿದ್ದೇವೆ. ಅಂಚೆ ಇಲಾಖೆಗೆ ಸಾರ್ವಜನಿಕರಿಂದ ಇಂಥ ವಿಳಂಬ ಕುರಿತು ದೂರುಗಳು ಬಂದರೇನಾದರೂ ವ್ಯವಸ್ಥೆ ಸರಿಹೋದೀತೇನೊ. ನಮ್ಮೊಂದಿಗೆ ಸಹಕರಿಸಿರಿ. ನಿಮ್ಮ ಸಲಹೆ, ಲೇಖನ, ಚಂದಾ ಎಲ್ಲವೂ ಪ್ರೀತಿಯಿಂದ ಬರಲಿ.

***ಸಂಪಾದಕ ಮಂಡಳಿ***

## ಅಭಿನಂದನೆಗಳು

ಕರ್ನಾಟಕದ ಪ್ರತಿಷ್ಠಿತ ಮಹಿಳೆ, ಚಿಂತಕಿ ಚಿ.ನಾ. ಮಂಗಳಾ ಅವರು ಸ್ಥಾಪಿಸಿದ ಶಾಶ್ವತೀ ಸಂಸ್ಥೆಯು ಮಹಿಳಾ ಅಧ್ಯಯನ, ಸಾಧಕರಿಗೆ ಪ್ರಶಸ್ತಿ ಮುಂತಾದ ಹಲವು ಉಪಯುಕ್ತ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದೆ. ಕಳೆದ ಕೆಲವು ವರ್ಷಗಳಿಂದ ನೀಡದೆ ಉಳಿದಿದ್ದ ಪ್ರಶಸ್ತಿಗಳನ್ನೆಲ್ಲ ಈ ಸಾಲಿನಲ್ಲಿ ನೀಡಲಾಯಿತು. ಪ್ರತಿ ವರ್ಷ ಸಂಸ್ಥೆಯು ನೀಡುವ ತಿರುಮಲಾಂಬ ಪ್ರಶಸ್ತಿ, ಸದೋದಿತಾ, ಕಲ್ಪವಲ್ಲೀ, ಗಾರ್ಗಿ ಪ್ರಶಸ್ತಿಗಳನ್ನು ಈ ಸಮಾರಂಭದಲ್ಲಿ ಇಪ್ಪತ್ತು ಮಹಿಳೆಯರು ಸ್ವೀಕರಿಸಿದರು.

ಕನ್ನಡದ ಪ್ರಸಿದ್ಧ ಲೇಖಕಿ ಸಾರಾ ಅಬೂಬಕರ್, ಸಮಾಜಸೇವಕಿ ಕೆ.ಟಿ. ಬನಶಂಕರಮ್ಮ, ಸಾಹಿತ್ಯ-ಸಂಸ್ಕೃತಿ ಕ್ಷೇತ್ರ ಮತ್ತು ಸಂಶೋಧನೆಗೆ ಹೆಸರಾದ ಡಾ. ಬಿ.ಎನ್. ಸುಮಿತ್ರಾಬಾಯಿ ಹಾಗೂ ಡಾ. ವಿಜಯಾ ಅವರು ಸಹ ಪ್ರಶಸ್ತಿ ಪಡೆದ ನಮ್ಮ ಬಳಗದ ಲೇಖಕಿಯರು. ಇವರಿಗೆ ಹಾಗೂ ಪ್ರಶಸ್ತಿ ಪಡೆದ ಎಲ್ಲ ಮಹಿಳೆಯರಿಗೆ `ನಮ್ಮ ಮಾನಸ'ದ ಅಭಿನಂದನೆಗಳು.

ಕರ್ನಾಟಕ ಲೇಖಕಿಯರ ಸಂಘವು ಪ್ರತಿವರ್ಷ ನೀಡುವ ಹಲವು ಪ್ರಶಸ್ತಿಗಳಲ್ಲಿ ಮುಖ್ಯವಾದ ಅನುಪಮಾ ನಿರಂಜನ ಪ್ರಶಸ್ತಿಯನ್ನು ಮಂಗಳೂರಿನ ಹಿರಿಯ ಲೇಖಕಿ ಆನಂದೀಬಾಯಿ ಸದಾಶಿವರಾವ್ ಪಡೆದುಕೊಂಡಿದ್ದಾರೆ. ಅವರಿಗೆ ಮತ್ತು ಪ್ರಶಸ್ತಿ ಪಡೆದವರೆಲ್ಲರಿಗೆ ನಮ್ಮ ಅಭಿನಂದನೆಗಳು.

ಕರ್ನಾಟಕ ಸರ್ಕಾರವು ನೀಡುವ ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿಯು ಈ ಸಾಲಿನಲ್ಲಿ ಬಂಡಾಯ ಲೇಖಕಿ ಲಲಿತಾನಾಯಕ್ ಅವರಿಗೆ ಸಂದಿದೆ. ಅವರಿಗೆ ನಮ್ಮ ಅಭಿನಂದನೆಗಳು.



# ಡಾ|| ಎಸ್.ಎಲ್. ಭೈರಪ್ಪನವರಿಗೆ ಒಂದು ಬಹಿರಂಗ ಪತ್ರ

• ಚಂಪಾವತಿ ಹೆಚ್.ಎಸ್.

ಮಾನ್ಯ ಭೈರಪ್ಪನವರೆ,

**'ಪಾ**ಪ ಪ್ರಜ್ಞೆ' – ಯಲ್ಲಿ ನರಳುವ ಹೆಣ್ಣು ಜೀವನದ ಒಂದು ವರ್ತುಲವನ್ನು ಸುತ್ತಿ ಕೊನೆಗೆ ಬ್ರಾಹ್ಮಣಶಾಹಿ, ಪುರೋಹಿತಶಾಹಿ ನಿರ್ದೇಶಿಸುವ ಹಿಂದೂಧರ್ಮಕ್ಕೆ ವಿಜೃಂಭಿತಳಾಗಿ ಹಿಂತಿರುಗುವ ಪ್ರಕ್ರಿಯೆ, ವಸ್ತು, ತಂತ್ರ, ಚಿಂತನೆ ನಿಮಗೇನೂ ಹೊಸದಲ್ಲ. ಧರ್ಮಶ್ರೀ, ವಂಶವೃಕ್ಷ, ದಾಟು.... ಹೀಗೆ ನಿಮ್ಮ ಕಾದಂಬರಿಯ ನಾಯಕಿಯರನ್ನು ಓದುತ್ತಾ ಬೆಳೆದ ನನಗೆ ರಜಿಯ/ಲಕ್ಷ್ಮಿಯ 'ಆವರಣ'ದಲ್ಲಿ ಆಘಾತವಾಗುವ ಅಂಶವೆಂದರೆ – ಈಗಿನ ರಾಜಕಾರಣದ ಸಂದರ್ಭದಲ್ಲಿ ನಿಮ್ಮನ್ನು ಸ್ಪಷ್ಟಪಡಿಸಿಕೊಂಡ ರೀತಿ. "...ಭಾರತದ ಪ್ರತಿಯೊಬ್ಬ ಪ್ರಜೆಯೂ ತಾನು ಪ್ರಗತಿಪರನೋ, ಪ್ರಗತಿ ವಿರೋಧಿಯೋ ಎಂಬುದನ್ನು ಸ್ಪಷ್ಟಪಡಿಸಿ ಕೊಳ್ಳಬೇಕಾದ ಕಾಲ ಈಗ ಬಂದಿದೆ...' (ಪು 100) ಎನ್ನುವ ನಿಮ್ಮ ಕಾದಂಬರಿಯ ಸಾಲುಗಳು ನಿಮ್ಮ ವ್ಯಕ್ತಿತ್ವದಲ್ಲೂ ಬಿಂಬಿಸಿ, ನಿಮ್ಮ ಕೋಮುವಾದಿ ತಾತ್ತ್ವಿಕತೆಯ ಪರಾಕಾಷ್ಠತೆಯನ್ನು 'ಆವರಣ'ದಲ್ಲಿ ಸೂಚಿಸುತ್ತಿದೆ.

ಲಕ್ಷ್ಮಿ/ರಜಿಯ ಮೂಲಕ ನಿಮ್ಮನ್ನು ನೀವೇ ಗುರುತಿಸಿಕೊಳ್ಳುವ ರೀತಿ, ಆಕೆಯ ಬಾಯಿಯಿಂದ ನೀವು ಹೇಳಬೇಕೆಂದಿರುವುದೆಲ್ಲವನ್ನು ಹೇಳಿಸುವುದು, ಇತಿಹಾಸದಲ್ಲಿ ನಿಮಗೆ ಬೇಕಾದಷ್ಟನ್ನು ಮಾತ್ರ ಹೆಕ್ಕಿರುವುದು, ಕೊನೆಗೆ 'ಆವರಣ' ಕಾದಂಬರಿ ವಾಸ್ತವವಾಗಿ ಎದುರಿಸ ಬಹುದಾದ ಸಮಸ್ಯೆಗಳನ್ನು ನೀವೇ ಕಾದಂಬರಿಯಲ್ಲಿ ಬರೆದು – ಲಕ್ಷ್ಮಿ ಬಂದಿಯಾದರೆ ನ್ಯಾಯಾಲಯದಲ್ಲಿ ಹೇಗೆ ಬಿಡುಗಡೆಯಾಗ ಬೇಕೆಂದು ಗ್ರಂಥದ ಆಕರಗಳನ್ನು ನೀಡಿ – ಕಾದಂಬರಿ (ಹಾಗೆ ಹೇಳ ಬಹುದಾದರೆ) ಅಂತ್ಯಕ್ಕೆ ನಿಮ್ಮನ್ನು ನೀವೇ ಜಾಗೃತವಾಗಿ ರಕ್ಷಿಸಿಕೊಂಡ ರೀತಿಯ ತಂತ್ರಗಾರಿಕೆ, ರಕ್ಷಿಸಿಕೊಳ್ಳಬಹುದಾದ ಜಾಣತನ, ಉಪಾಯಗಳು ನನ್ನನ್ನು ದಿಗ್ಮೂಢಗೊಳಿಸಿವೆ.

ಹಿಂದೂಧರ್ಮದ ವಕ್ತಾರರಾಗುವ, ಇತಿಹಾಸದ ಸತ್ಯಾಸತ್ಯತೆ ಹುಡುಕುವ ನಿಮ್ಮ ಅದಮ್ಯ ಬಯಕೆ, ಚೇತನ, ಉತ್ಸಾಹದ ಕಾವಿನಲ್ಲಿ 'ಆವರಣ' ಕಾದಂಬರಿ ಕಲಾತ್ಮಕತೆ, ಸೌಂದರ್ಯಪ್ರಜ್ಞೆ ಕಳೆದುಕೊಂಡು 'ಕೋಮುವಾದಿ' ರಾಜಕೀಯದಲ್ಲಿ ನಿಮ್ಮ ನೆಲೆ–ಬೆಲೆ ಗುರುತಿಸಿಕೊಳ್ಳುವ ಪ್ರಕ್ರಿಯೆಯಾಗಿ ನಿಮ್ಮ ಸೃಜನಾತ್ಮಕ ನೆಲೆ ಪೂರ್ಣವಾಗಿ ದಾರಿ ತಪ್ಪಿರುವುದಕ್ಕೆ ನನಗೆ ಖೇದವೆನಿಸುತ್ತದೆ.

ಭೈರಪ್ಪನವರೇ,

ಧರ್ಮ ರಾಜಕಾರಣವನ್ನು ಎತ್ತಿ ಹಿಡಿಯಲು ನಿಮಗೆ 'ಹೆಣ್ಣು' ನಾಯಕಿಯಾಗುವ ಅಗತ್ಯವಿತ್ತೆ? 'ಪುರುಷ' ನಾಯಕನ ಮೂಲಕ ನಿಮ್ಮ ಸಂದೇಶಗಳನ್ನು ರವಾನಿಸಲು ಸಾಧ್ಯವಾಗುತ್ತಿರಲಿಲ್ಲವೇ? ಅಥವಾ ಎಲ್ಲಾ ಗಂಡಸರೂ ನೀವು ನಿಮ್ಮ ಡಾ. ರಾಜಧಾನ್ ರವರ ಬಾಯಲ್ಲಿ ಹೇಳಿಸಿರುವಂತೆ "... ಮುಸ್ಲಿಂ ಆಳ್ವಿಕೆಯು ಭಾರತದ ಗಂಡಸರನ್ನೆಲ್ಲ ಶಿಖಂಡಿಗಳನ್ನಾಗಿ ಮಾಡಿದೆ..." (ಪು.246) ಎನ್ನುವ ಜೋಕಿನ ಪರಮಾವಧಿಯೇ?

ಮುಸ್ಲಿಂ ಸಮುದಾಯದ ಮೂಲಭೂತವಾದವನ್ನು ಟೀಕಿಸುವುದೇನೋ ಸರಿ. ಹಾಗೆಯೇ ಎಲ್ಲಾ ಧರ್ಮಧ ಮೂಲಭೂತ ವಾದವನ್ನು ಕೂಡಾ ನಾವು ನಮ್ಮಕಣ್ಣಿಗೆ ಕಾಣಿಸಿಕೊಂಡಾಗ ಮಾತ್ರವೇ ತಾನೆ 'ಮನುಷ್ಯ' ಸಹಜವಾಗಿ ಅರಳಲು ಸಾಧ್ಯ; ಮಾನವೀಯತೆಗೆ ಅರ್ಥ ಬರಲು ಸಾಧ್ಯ, ಅಲ್ಲವೇ? ನಿಮ್ಮ ಲಕ್ಷ್ಮಿ/ರಜಿಯ ಸ್ತ್ರೀವಾದಿಗಳ ಬಗ್ಗೆ ಮಾತನಾಡುತ್ತಾಳೆ "...ಆಧುನಿಕ ವಿದ್ಯೆಗೆ ಒಳಗಾದ ಪ್ರತಿಯೊಬ್ಬರೂ ಸ್ತ್ರೀವಾದಿಯಾಗಿರುತ್ತಾರೆ. ... ಹೆಂಗಸರಂತೂ ಪ್ರಖರವಾದ ಸ್ತ್ರೀವಾದಿ ಯಾಗಿಯೇ ಇರ್ತಾರೆ. ಸ್ತ್ರೀವಾದದ ಮೊನಚಿಲ್ಲದ ಆಧುನಿಕ ವಿದ್ಯಾವಂತ ಮಹಿಳೆ ಒಬ್ಬಳೂ ಇರಲು ಸಾಧ್ಯವಿಲ್ಲ... ನಿನ್ನ ಧರ್ಮದ ಹೆಂಗಸರಿಗೆ ಮುಕ್ತವಾಗಿ ಆಧುನಿಕ ವಿದ್ಯೆಯನ್ನು ಕೊಟ್ಟರೆ ಅವರೂ ಇಂತಹ ಪ್ರಶ್ನೆ ಗಳನ್ನೆತ್ತುತ್ತಾರೆ... ಅಗತ್ಯವಿದ್ದಲ್ಲಿ ಯಾರದು ಗೌಣ, ಯಾರದು ಪ್ರಧಾನ ಪಾತ್ರ ಎಂಬಂತಹ ಪ್ರಶ್ನೆಗಳನ್ನೆತ್ತುತ್ತಾರೆ..."(ಪು. 243)

ನಾನೂ ಒಬ್ಬ ಸ್ತ್ರೀವಾದಿಯೇ. ಸ್ತ್ರೀವಾದಿಗಳು ಹಿಂದೂ ಧರ್ಮ ದಲ್ಲಿನ ಕುಟುಂಬದ ಒಳಗಿನ ಹಿಂಸೆಯನ್ನು ಪ್ರಶ್ನಿಸುವಂತೆ ಮುಸ್ಲಿಂ ಸಮುದಾಯದಲ್ಲೂ ಪ್ರಶ್ನಿಸುತ್ತಾರೆ. ಪಿತೃಪ್ರಧಾನತೆ, ಕೋಮುವಾದದ ಸಂಚನ್ನು ಎಲ್ಲಾ ಧರ್ಮದಲ್ಲೂ ಭೇದಿಸಲು ಪ್ರಯತ್ನಿಸುತ್ತಾರೆ. ಯಾವುದೇ ಧರ್ಮರಾಜಕಾರಣ ಹೆಂಗಸರನ್ನು ಒಡೆಯಬಾರದು ಎಂದು ಆಶಿಸುತ್ತಾರೆ. ಹಿಂದು, ಮುಸ್ಲಿಂ, ಕ್ರಿಶ್ಚಿಯನ್ ಎಲ್ಲ ಹೆಂಗಸರೂ ಧರ್ಮ ರಾಜಕಾರಣ ಒಡ್ಡುವ ಬಂಧನದ ಸವಾಲುಗಳನ್ನು ಎದುರಿಸಿ, ಬಿಡುಗಡೆಯ ಹಾದಿ ಸ್ಪಷ್ಟಪಡಿಸಿಕೊಳ್ಳಬೇಕೆನ್ನುತ್ತಾರೆ. ಸ್ತ್ರೀವಾದಿಗಳು ಕೋಮುವಾದಿ ರಾಜಕಾರಣದಂತೆ ಒಬ್ಬ ಹೆಂಗಸನ್ನು ಇನ್ನೊಬ್ಬಳಿಗೆ ಎದುರಾಗಿ ನಿಲ್ಲಿಸಿ ಹಿಂಸೆ ಬೋಧಿಸುವುದಿಲ್ಲ. ಬದಲು ನಮ್ಮಸ್ವಂತಿಕೆ, ಸ್ವವಿಚಾರ, ಜೀವನದ ಬಿಡುಗಡೆಯ ಹಾದಿಯಲ್ಲಿ ಕೈ ಹಿಡಿದು ನಡೆಯಬೇಕಾದ ಅಗತ್ಯತೆಯ ದೃಷ್ಟಿಕೋನವನ್ನು ಸೂಚಿಸುತ್ತಾರೆ. 'ಹಿಂದೂ' ಧರ್ಮದ ವೈವಾಹಿಕ ಚೌಕಟ್ಟಿನೊಳಗಿನ ಪೈಶಾಚಿಕ ಹಿಂಸೆಯನ್ನು ವಿರೋಧಿಸುತ್ತಲೇ ಮುಸ್ಲಿಂ ಹೆಂಗಸರಿಗಿರುವ ಮರುಮದುವೆಯ ಅವಕಾಶಗಳನ್ನು ಒಂದು Politicsನ ಅಂಶವಾಗಿ ಗುರುತಿಸುತ್ತಾರೆ. ಮುಸ್ಲಿಂ ಮಹಿಳೆಯ ಘೋಷಾ ಪದ್ಧತಿ ವಿರೋಧಿಸುತ್ತಲೇ ಆಯ್ಕೆಯ ಪ್ರಶ್ನೆಗಳ ಬಗ್ಗೆ ಮಾತನಾಡುತ್ತಾರೆ. ಯಾವುದೇ ಧರ್ಮರಾಜಕಾರಣ ಸ್ತ್ರೀಯ ಬದುಕನ್ನು ಮುರುಟಿಸುತ್ತದೆ ಎಂದಾಗ ಅಂಥದ್ದರ ವಿರುದ್ಧ ಸ್ತ್ರೀವಾದ ಬಂಡೇಳುತ್ತದೆ. ಭಿನ್ನತೆಗಳಲ್ಲೂ ಏಕತೆಯನ್ನು ಹುಡುಕುವುದೇ ನಮ್ಮ ನಿಲುವು ಕೂಡಾ ಆಗಿದೆ.

ನಿಮ್ಮ 'ಆವರಣ' ದ ಆಶಯ ಮುಸ್ಲಿಂ ಮೂಲಭೂತ ವಾದವನ್ನು ವಿರೋಧಿಸುವುದು ಮಾತ್ರ, ಗೋಹತ್ಯೆ ನಿಷೇಧ, ಕುಟುಂಬಯೋಜನೆ, ನಾಗರಿಕ ಸಂಹಿತೆ, ದೇವಸ್ಥಾನದ ವಿನಾಶ, ಟಿಪ್ಪು, ಔರಂಗಜೇಬರ ಟೀಕೆ, ಘೋಷಾ ಪದ್ಧತಿಯ ವಿರೋಧ ಇವು ನಿಮ್ಮ ಅಜೆಂಡಾಗಳು. ಇದರ ಅಭಿವ್ಯಕ್ತಿಗೆ ಒಕ್ಕಲಿಗ ಹುಡುಗಿ ನಿಮಗೆ ನಾಯಕಿ. ಒಕ್ಕಲಿಗ ಹುಡುಗಿಯ ಬದಲು ಒಬ್ಬ ದಲಿತಹುಡುಗಿಯನ್ನು ನೀವು ನಾಯಕಿ ಯನ್ನಾಗಿಸಿದ್ದರೆ ಗೋಮಾಂಸ ಭಕ್ಷಣೆ, ದೇವಸ್ಥಾನದ ವಿನಾಶದ ಬಗ್ಗೆ ನೀವು ಇನ್ನೂ ಹೆಚ್ಚು ಪ್ರಬಲವಾಗಿಯೇ 'ಸಂದೇಶ'ಗಳನ್ನು ನೀಡ ಬಹುದಿತ್ತು ಅಲ್ಲವೇ ಭೈರಪ್ಪನವರೇ? ಆಕೆಯ ಶುದ್ಧಿಮಾಡಿ, ಹಿಂದೂ ಧರ್ಮ ಅಂದರೆ ವೈದಿಕಧರ್ಮ ಹೇಗೆ ಆಕೆಯನ್ನೂ ಒಳಗೊಳ್ಳುತ್ತದೆ

ಎಂಬುದನ್ನು, ದಲಿತರು ಹೇಗೆ ಹಿಂದೂಧರ್ಮದ, ಅಂದರೆ ವೈದಿಕತತ್ವಗಳನ್ನು ಅಳವಡಿಸಿಕೊಂಡಿದ್ದಾರೆ ಎಂಬುದನ್ನೂ ಸೂಚಿಸಿ ಬಿಡಬಹುದಿತ್ತು. ಆದರೆ ಮುಂದಾಲೋಚನೆ, ರಕ್ಷಣೆಯ ಹುನ್ನಾರಕ್ಕೆ ಒಕ್ಕಲಿಗ ಹುಡುಗಿ ನಿಮಗೆ safe ಅನ್ನಿಸಿರಬೇಕು.

"....ಸಮಾನತೆಯ ಮಾತನಾಡ್ತಾಳೆ" (ಪು. 13)

"....ಹೆಂಗಸು ಅಂದರೆ ಅಬಲೆ ಅನ್ನುವ ಸತ್ಯವನ್ನು ಹೋಗಲಾಡಿಸುಕ್ಕೆ ಸಾಧ್ಯವಿಲ್ಲ. ದೈಹಿಕವಾಗಿಯೂ ಅಷ್ಟೆ, ಬುದ್ಧಿ ಮನಸ್ಸುಗಳಲ್ಲಿಯೂ ಅಷ್ಟೆ, ದೈವ ಸೃಷ್ಟಿ ಸುಳ್ಳಲ್ಲ" (ಪು. 15)

"ಹೆಂಗಸಿನ ಮುಖದಲ್ಲಿ ಸೌಂದರ್ಯವಿರೋದಿಲ್ಲ"
"ಹೆಂಗಸರಿಗೆ ಆತ್ಮಾಭಿಮಾನ ಕಡಿಮೆ"

ಇಂಥಲ್ಲಿ ಆರೋಗ್ಯಕರ, ಪ್ರಗತಿಪರ ಮನಸ್ಸು ಇರುವುದು ಸಾಧ್ಯವೆ?

ಅಮೀರನನ್ನು ಮದುವೆಯಾಗಲು ಲಕ್ಷ್ಮಿ ಹಟತೊಟ್ಟಾಗ ಆಕೆಯ ತಂದೆ ಹೇಳುತ್ತಾರೆ :

**"ನೀನೊಬ್ಬಳು ಏನು ಮಾಡಿಕೊಂಡೆ ಅನ್ನೋದೊಂದೇ ಅಲ್ಲ. ನಿನ್ನ ಹೊಟ್ಟೇಲಿಹುಟ್ಟುವ ಮಗುವೋ, ಅದರ ಮಗುವೋ, ಯಾವುದೋ ಒಂದು ತಲೆಮಾರಿನ ಮಗುವು ನಮ್ಮ ದೇವಸ್ಥಾನವನ್ನು ಒಡೆದು ನಾಶ ಮಾಡುತ್ತೆ. ಅದರ ಪಾಪ ನಿನಗೆ ತಟ್ಟುತ್ತೆ ಅರ್ಥ ಮಾಡಿಕೋ ಮಗಳೆ..."** (ಪುಟ 19)

ಈ ಸನ್ನಿವೇಶದಲ್ಲಿ ದಲಿತಮಹಿಳೆ ನಾಯಕಿಯಾಗಿದ್ದರೆ ಏನು ಹೇಳಿಸುತ್ತಿದ್ದಿರಿ ಭೈರಪ್ಪನವರೇ? ಬಹುತೇಕ ಹಳ್ಳಿಗಳಲ್ಲಿ ದಲಿತರು ಇಂದಿಗೂ ದೇವಸ್ಥಾನ ಪ್ರವೇಶ ಮಾಡುವುದಿಲ್ಲ. ಆಕೆಗೆ ದೇವಸ್ಥಾನ ಒಡೆದು ನಾಶವಾದ ಬಗ್ಗೆ ಒಂದು 'ಪಾಪಪ್ರಜ್ಞೆ' ಮೂಡಿಸಲು ನಿಮಗೆ ಸಾಧ್ಯವಾಗುತ್ತಿತ್ತೇ? ಸಾವಿರಾರು ವರ್ಷಗಳು ದೇವಸ್ಥಾನದ ಪ್ರವೇಶವೇ ನಿಷಿದ್ಧವಾಗಿರುವ ಹರಿಜನ ಹೆಣ್ಣುಮಗಳಿಗೆ ನಿನ್ನ ಹೊಟ್ಟೆಯಲ್ಲಿ ಹುಟ್ಟುವಮಗು, ಅಥವಾ ಇನ್ನಾವುದೋ ತಲೆಮಾರಿನ ಮಗು ದೇವಸ್ಥಾನ ನಾಶಮಾಡುತ್ತದೆ ಎಂದರೆ ಆಕೆಯ ಪ್ರತಿಕ್ರಿಯೆ ಏನಾಗಿರಬಹುದಿತ್ತು? ವೈದಿಕಧರ್ಮದ ಪಶ್ಚಾತ್ತಾಪ, ಗೋಮಾಂಸ ಭಕ್ಷಣೆಯ ನಿಷೇಧ ಆಕೆಯ ಮೇಲೆ ಹೇರಿ ಹಿಂದೂ-ವೈದಿಕ ಧರ್ಮವನ್ನು ಆಕೆಯ ಮೇಲೆ ಹೇರಲು ನಿಮಗೆ ಸಾಧ್ಯವಾಗುತ್ತಿತ್ತೆ ? ಯಾವುದು ಹಿಂದೂಧರ್ಮ, ಯಾವುದು ಸಂಸ್ಕೃತಿ ಎಂಬ ಪ್ರಶ್ನೆಗಳನ್ನು ನೀವು ಎದುರಿಸಬೇಕಾಗುತ್ತಿತ್ತೆಂಬ ಅರಿವು ನಿಮಗೆ ಇದ್ದಿರಲೂ ಸಾಕು.

ಲಕ್ಷ್ಮಿ-ರಜಿಯಾ ಆಗಿ ಅನುಭವಿಸುವ ಮಾನಸಿಕ ಕ್ಷೋಭೆಯ ಬಗ್ಗೆ ಬರೆಯುತ್ತೀರಿ. ಬೇರೆ ಜಾತಿಯಲ್ಲಿ ಮದುವೆಯಾಗುವ ಪ್ರತಿಯೊಬ್ಬರಲ್ಲೂ ಈ ರೀತಿಯ ಸಾಂಸ್ಕೃತಿಕ ವ್ಯತ್ಯಾಸಗಳ ದ್ವಂದ್ವ ಇದ್ದೇ ಇರುತ್ತದೆ. ಹಾಗಾಗಿ ವಿಭಿನ್ನತೆಗಳಲ್ಲಿ ಏಕತೆ ಕಾಣುವ ಮನಸ್ಸೊಂದು ನಮ್ಮಲ್ಲಿ ಬೆಳೆಯಬೇಕಾಗಿದೆ ಎಂದು ನಿಮಗೆ ಅನ್ನಿಸುವುದಿಲ್ಲವೇ?

ಹೆಣ್ಣನ್ನು ಸಾಮಾನ್ಯವಾಗಿ ಸಂಸ್ಕೃತಿಯ ಪ್ರತಿನಿಧಿಯಾಗಿ, ಧಾರ್ಮಿಕ ಚಿಹ್ನೆಯಾಗಿ ಅನಾದಿಕಾಲದಿಂದಲೂ ಬಳಸಿಕೊಂಡು ಬರಲಾಗುತ್ತಿದೆ. ತಾವು ಕೂಡಾ ಅದೇ ಕೆಲಸವನ್ನು ಲಕ್ಷ್ಮಿಯ ಮೂಲಕ ಮಾಡಿಸಿ, 'ಭಾರತೀಯ ನಾರಿ' ಯ ಕಲ್ಪನೆಯನ್ನು ಜಯಪ್ರದವಾಗಿ ಎತ್ತಿ ಹಿಡಿಯಲು ಪ್ರಯತ್ನಿಸಿದ್ದೀರಿ. ಆದರೆ ರಜಿಯಾಗೆ ಸ್ವಧರ್ಮದ ಆಕರ್ಷಣೆಯಲ್ಲಿ, ಅಪ್ಪನ ಗಾಂಧೀವಾದದಲ್ಲಿ, ಉಗ್ರನರಸಿಂಹನ ವಿಗ್ರಹ ಕುರಿತು ಇರುವ ಹೊಯ್ದಾಟಗಳು ಹೆತ್ತ ಮಗ ನಜೀರನ ಬಗ್ಗೆ ಕಾಣಿಸದಿರುವುದು ಸ್ವಲ್ಪ ಆಶ್ಚರ್ಯವಾಗುತ್ತದೆ. ಆತನ ಬಗೆಗಿನ ಆಕೆಯ ನಿಲುವುಗಳೆಲ್ಲ ಕರುಳಿನ ಸಂಬಂಧದ ರೀತಿ ಧ್ವನಿಸದೇ ಒಬ್ಬ intellectual ರೀತಿ ಧ್ವನಿಸುತ್ತದೆ. ಇರಲಿ ಬಿಡಿ, ಮಾತೃತ್ವದ ವಿಜೃಂಭಣೆ ಇಲ್ಲವೆಂದು ನಾವು ಸಮಾಧಾನ ಪಟ್ಟುಕೊಳ್ಳಬಹುದು! ಹೆಣ್ಣು ಬೌದ್ಧಿಕಳಾಗಿ ಮೇಲ್ಪಂಕ್ತಿಯಲ್ಲಿ ನಡೆದರೆ ಹಿಂದೂಸಂಸಾರದಲ್ಲಿ ಆಕೆ ಸಂಸಾರದ ಸಾಮರಸ್ಯವನ್ನು ಸಾಧಿಸಲು ಸಾಧ್ಯವಿತ್ತೇ? ಹಿಂದೂಸಮಾಜ ಆಕೆಯನ್ನು ಕರೆದು ಮಣೆ ಹಾಕಿ ಬಿಡುತ್ತಿತ್ತೇ? ಎಂಬ ಪ್ರಶ್ನೆಗಳು ನನ್ನನ್ನು ಕಾಡುತ್ತಿವೆ.

ಕೊನೆಗೂ ರಜಿಯಾ/ಲಕ್ಷ್ಮಿಯ ರಕ್ಷಣೆಗೆ ಅಮೀರನನ್ನು ಕರೆತರುತ್ತೀರಿ. ಮುಸ್ಲಿಂ ಗಂಡಸರಲ್ಲೂ ಸ್ವಲ್ಪ ಮಟ್ಟಿಗೆ ಒಳ್ಳೆಯತನವಿದೆ ಎಂದು ಗ್ರಹಿಸಿದ್ದಕ್ಕೆ ಧನ್ಯವಾದಗಳು ಅಥವಾ ಆಕೆ ತನ್ನ ವ್ಯಕ್ತಿತ್ವದಿಂದ ಆತನನ್ನು ಗೆದ್ದಳು, ಹಿಂದೂ ಧರ್ಮದತ್ತ ಸೆಳೆದಳು ಎಂಬ ಅರ್ಥವೋ! ಏಕೆಂದರೆ ಹಿಂದೂ/ವೈದಿಕ ಧರ್ಮ ಕುಟುಂಬದ ರಕ್ಷಣೆಗೆ ಟೊಂಕಕಟ್ಟಿ ನಿಂತಿದೆಯಲ್ಲವೇ?

ಲಕ್ಷ್ಮಿ- ಲಕ್ಷ್ಮಿಯಾಗಿ, ಅಮೀರ್-ಅಮೀರ್ ಆಗಿಯೇ ಉಳಿದೂ ಒಂದುಗೂಡಿನಲ್ಲಿ ಅವರಿಬ್ಬರ ವಿಭಿನ್ನತೆಗಳಲ್ಲೂ ಏಕತೆಯನ್ನು ಉಳಿಸಿಕೊಂಡು 'ಮಾನವೀಯ'ವಾಗಿ ಸಂಸಾರ ಮಾಡುವುದನ್ನು ನಾವು ಸ್ತ್ರೀವಾದಿಗಳು ಬಯಸುವ ದೃಷ್ಟಿಹೀನರ ಸಮಾಜದ ಮಾದರಿಯಾಗ ಬಹುದೇನೋ. ❑

---

ಮಹಿಳೆಯರನ್ನು ಆವರಿಸಿರುವ ಸಾಮಾಜಿಕತೆಯಲ್ಲಿ ಅವಳ ಚಲನಶೀಲತೆಗೆ ಅವಕಾಶಗಳಿಲ್ಲ. ಅವಳ ಪಾಡುಗಳು ಹಾಡುಗಳಾಗುವ ಹಾದಿಗಳು ಮುಚ್ಚಿಕೊಂಡಿವೆ. ಕಲಿಕೆಯ ಕದಗಳು ಅವಳ ಪಾಲಿಗೆ ತೆರೆದಿಲ್ಲ. ಧ್ಯಾನಸ್ಥಳಾಗಲು ಬೇಕಾದ ಏಕಾಂತವಂತೂ ಅವಳಿಗೆ ದುರ್ಲಭವೇ ಸರಿ. ಅದಾವ ಸಾಮಾಜಿಕ ತಂತ್ರವು ಇಂಥಾ ವಾತಾವರಣವನ್ನು ಕಲ್ಪಿಸಿ ನಡೆಸುತ್ತಿದೆ ಎಂಬುದನ್ನು ಕಂಡುಕೊಂಡ ಹೊರತು ಮಹಿಳೆಯರಿಗೆ ಈ ಬಂಧನಗಳಿಂದ ಮುಕ್ತಿ ಸಾಧ್ಯವಾಗುವುದಿಲ್ಲ.

—ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

---

ಆತ ಮದುವೆಗೆ ಮೊದಲು
ನೀನೆ ನನ್ನ ಜೀವವೆಂದ
ಮದುವೆಯ ನಂತರ
ನೀನು ನನ್ನ ಮಕ್ಕಳ ಜೀವವೆಂದ
ಈಗ ತಾನು ಮಾತ್ರ ತನ್ನ ಗೆಳತಿಯ
ಜೀವವೆಂದ

— ರಾಜಿ

# ಬದಲಾವಣೆ ನಮ್ಮಿಂದ ಬರಬೇಕು

**'ದ ಕೇಜ್ಡ್ ವರ್ಜಿನ್' ಕೃತಿ : ಲೇ. ಅಯ್ಯಾನ್ ಹಿರ್‌ಸಿ ಆಲಿ**

ಅಯ್ಯಾನ್ ಹಿರ್‌ಸಿ ಆಲಿ ಮುಸ್ಲಿಂ ಮೂಲ ಭೂತವಾದದ ವಿರುದ್ಧ ಸೆಣಸಾಡುತ್ತಿರುವ ಧೀರ ಮಹಿಳೆ. ಮಹಿಳೆಯರ ಮೇಲಿನ ನಿರ್ಬಂಧಗಳನ್ನು ಧೈರ್ಯವಾಗಿ ಪ್ರಶ್ನಿಸುತ್ತಾಳೆ. ಆಕೆ ಎತ್ತುವ ಪ್ರಶ್ನೆಗಳು ಹೊಸಪ್ರಶ್ನೆಗಳೇನಲ್ಲ. ಆದರೆ ಸಾಂದರ್ಭಿಕವಾಗಿ ಹೊಸ ಅನುಭವದಿಂದ ಪ್ರಸ್ತುತತೆಯನ್ನು ಪಡೆಯುತ್ತವೆ. ಈಕೆ ಇತ್ತೀಚೆಗೆ 'ದ ಕೇಜ್ಡ್ ವರ್ಜಿನ್' ಎನ್ನುವ ಪುಸ್ತಕವನ್ನು ಬರೆದಿದ್ದಾಳೆ. ಈ ಪುಸ್ತಕದಲ್ಲಿ ಮೂಲಭೂತವಾದ ಹೇಗೆ ಮಹಿಳೆಯರ ದನಿಯನ್ನು ಅಡಗಿಸುತ್ತದೆ ಎಂಬುದನ್ನು ಸವಿವರವಾಗಿ ವಿಶ್ಲೇಷಿಸುತ್ತಾಳೆ. ಈ ಪುಸ್ತಕವನ್ನು ಇಲ್ಲಿ ಲೇಖಕಿ ತಸ್ಲೀಮಾ ನಜರೀನ್ ಪರಿಚಯಿಸಿದ್ದಾರೆ.

ಆಫ್ರಿಕಾದಲ್ಲಿ ಜನಿಸಿದ ಅಯ್ಯಾನ್ ಪಾಶ್ಚಾತ್ಯ ಯುರೋಪಿಯನ್ ದೇಶಗಳಲ್ಲಿ ವಾಸಿಸುವ ಮುಸ್ಲಿಂ ಜನಾಂಗದ ಮಹಿಳೆಯರ ಜೀವನವನ್ನು ಹತ್ತಿರದಿಂದ ಕಂಡವರು. ಆಕೆಯ ಜನಾಂಗದ ಮಹಿಳೆಯರ ಪ್ರಾತಿನಿಧ್ಯಕ್ಕಾಗಿ ಹೋರಾಡುವುದರ ಮೂಲಕ ಆಕೆ ಎಂ.ಪಿ. ಆಗಿ ಆಯ್ಕೆಯಾಗಿದ್ದಾರೆ.

ಅಯ್ಯಾನ್ ಮುಸ್ಲಿಂ ಮಹಿಳೆಯರ ಸಮಸ್ಯೆಗಳನ್ನು, ಸಾಂಪ್ರದಾಯಿಕ ಒತ್ತಡಗಳನ್ನು, ಪಿತೃಪ್ರಧಾನ ಸಮಾಜದಲ್ಲಿಯ ಶೋಷಣೆಯನ್ನು ಇಸ್ಲಾಂಮೂಲದಲ್ಲಿ ಹುಡುಕುತ್ತಾರೆ. ಬಾಲ್ಯವಿವಾಹ, ಪರದಾಪದ್ಧತಿ, ಹೆಣ್ಣು ಭ್ರೂಣಹತ್ಯೆ, ಸ್ತ್ರೀಯರ ಪಾವಿತ್ರ್ಯಕ್ಕೆ ನೀಡುವ ಒತ್ತು, ಕುಟುಂಬದ ಗೌರವವನ್ನು ಕಾಪಾಡಲು ಸ್ತ್ರೀಯರನ್ನು ಹತ್ಯೆಗೈಯುವುದು ಮುಂತಾದವುಗಳನ್ನು ಇಸ್ಲಾಂಮೂಲದಲ್ಲಿ ಹುಡುಕುತ್ತಾರೆ. ಧರ್ಮಕ್ಕೂ  ಮಹಿಳೆಯರಮೇಲೆ ನಡೆಯುತ್ತಿರುವ ಶೋಷಣೆಗೂ ಇರುವ ಸಂಬಂಧ ತೀರಾ ತೆಳುವಾದುದು.  ಪುರುಷಪ್ರಧಾನ ಸಮಾಜವು ಯಾವುದೇ ಧರ್ಮವಾಗಿದ್ದರೂ ಮಹಿಳೆಯರನ್ನು ಹಿಂಸಿಸುತ್ತದೆ. ಕ್ರಿಶ್ಚಿಯನ್ ಸಮಾಜಗಳು ತಾವು ಸೆಕ್ಯುಲರ್ ದೇಶವನ್ನು ಕಟ್ಟುವ, ಪುರುಷರಿಗೂ ಹಾಗೇ ಮಹಿಳೆಯರಿಗೂ ಸಮಾನ ಹಕ್ಕು ಭಾಧ್ಯತೆಗಳನ್ನು ನೀಡುವ ಪ್ರಕ್ರಿಯೆಯಲ್ಲಿ ಸಾವಿರಾರು ಸ್ತ್ರೀಯರನ್ನು ಹತ್ಯೆಗೈದಿವೆ. ಹಿಂದುಗಳು ಗಂಡಂದಿರ ಸಾವಿನ ಬೆಂಕಿಯಲ್ಲಿ ಹೆಂಗಸರನ್ನು  ತಳ್ಳಿದ್ದಾರೆ. ಈ ಧೋರಣೆಯನ್ನು ಪ್ರಪಂಚದ ಎಲ್ಲ ಧರ್ಮಗಳಲ್ಲೂ ನೋಡಬಹುದು.

ಆದರೆ, ಇತರ ಜನಾಂಗಗಳು ಪ್ರಗತಿಯತ್ತ ಹೆಜ್ಜೆ ಹಾಕುತ್ತ, ಸ್ತ್ರೀ ಮತ್ತು ಪುರುಷರಿಗೆ ವಿವಿಧ ಕ್ಷೇತ್ರದಲ್ಲಿ ಸಮಾನತೆಯನ್ನು ನೀಡುತ್ತಿರುವ ಹಂತದಲ್ಲಿದ್ದರೆ, ಮುಸ್ಲಿಂ ಮಹಿಳೆಯರು ಅಸಮಾನತೆಯಿಂದ ನರಳುತ್ತಿರುವುದು ಕಂಡುಬರುತ್ತಿದೆ. ಮುಸ್ಲಿಂಸಮಾಜ ಕತ್ತಲೆಯಗೂಡಲ್ಲಿ ಕನವರಿಸುತ್ತಿದೆ. ಇಸ್ಲಾಮಿಕ್‌ದೇಶಗಳಲ್ಲಿ ಇವುಗಳಿಗೆ ಕಾರಣಗಳು ಭಿನ್ನವಾಗಿವೆ. ಜನರು ಮುಗ್ಧರಾಗಿದ್ದಾರೆ, ಅನಕ್ಷರತೆ ತುಂಬಿ ತುಳುಕಾಡುತ್ತಿದೆ, ಮೂಲಭೂತವಾದದಲ್ಲಿ ಕಂಡುಬರುವ ಸರ್ವಾಧಿಕಾರಿ ಧೋರಣೆ ಹಾಗೂ ಪಾಶ್ಚಾತ್ಯ ದೇಶಗಳಲ್ಲಿ ಇಸ್ಲಾಂ ಬಗೆಗಿರುವ ಧೋರಣೆ ಮುಂತಾದವು ಕಾರಣಗಳಾಗಿವೆ. ಪ್ಯಾಲಸ್ತೈನ್ ಹಾಗೂ ಇರಾಕ್ ವಿರುದ್ಧ ಅಮೆರಿಕಾದ ಭಯೋತ್ಪಾದನೆ ಯುವಕರನ್ನು ಮೂಲಭೂತ ವಾದದೆಡೆಗೆ ತಳ್ಳುತ್ತದೆ. ಒಂದುಕಾಲದಲ್ಲಿ ಪಶ್ಚಿಮ ಏಷಿಯಾದಲ್ಲಿ ಲಿಬರಲ್ ಆದ ಚಳವಳಿಗಳು ಕಂಡುಬರುತ್ತಿದ್ದವು. ಆದರೆ ಪಾಶ್ಚಾತ್ಯದೇಶಗಳ ಕುತಂತ್ರದಿಂದಾಗಿ ಈ ಚಳವಳಿಗಳು ನಾಶವಾದವು. ಮುಸ್ಲಿಂ ಮಹಿಳೆಯರ ಸ್ಥಿತಿಗಳಿಗೆ ಕೇವಲ ಇಸ್ಲಾಂ ಧರ್ಮವನ್ನು ದೂಷಿಸುವುದು ಸರಿಯಲ್ಲ. ಜಾತ್ಯತೀತ ಪರಿಕಲ್ಪನೆ, ಸಮಾನ ಅವಕಾಶ, ವಿದ್ಯಾಭ್ಯಾಸ, ಆರೋಗ್ಯಕರ ವಾತಾವರಣಗಳು ವೈಜ್ಞಾನಿಕ ಮನೋಭಾವನೆಯ ಬೆಳವಣಿಗೆಗೆ ಕಾರಣವಾಗುತ್ತವೆ. ಮಹಿಳೆಯ ವಿರುದ್ಧವಿರುವ ಧೋರಣೆಗಳನ್ನು ತೊಡೆದು ಹಾಕಬೇಕೆಂದರೆ ಮೂಲಭೂತವಾದಿ ಪುರುಷಪ್ರಧಾನ ನೆಲೆಗಟ್ಟನ್ನು ಅಲುಗಾಡಿಸಲೇ ಬೇಕಾಗುತ್ತದೆ.

ಬಹುಪಾಲು ಮುಸ್ಲಿಂಕುಟುಂಬಗಳಲ್ಲಿ ಕುಟುಂಬಯೋಜನೆ, ಗರ್ಭಪಾತ ಹಾಗೂ ಲೈಂಗಿಕಹಿಂಸೆಯ ವಿರುದ್ಧ ಮಾತನಾಡುವುದನ್ನು ನಿಷೇಧಿಸಲಾಗಿದೆ. ಆದರೆ ಇದು ಇಸ್ಲಾಂಧರ್ಮಕ್ಕೆ ಸಂಬಂಧಪಟ್ಟಿದೆಯೆಂದು ಹೇಳುವುದಕ್ಕಿಂತ ಆಚರಣೆ, ಸಂಸ್ಕೃತಿ ಹಾಗೂ ಪದ್ಧತಿಗೆ ಸಂಬಂಧಪಟ್ಟಿದೆಯೆಂದು ಹೇಳಬಹುದು. ಆದರೆ ಅಯ್ಯಾನ್ ಇವೆಲ್ಲವೂ ಧರ್ಮಕ್ಕೆ ಸಂಬಂಧಪಟ್ಟಿವೆಯೆಂದು ಹೇಳುತ್ತಾರೆ!

ಸಾಂಪ್ರದಾಯಿಕವಾಗಿ ವಂಶದ ಅಭಿವೃದ್ಧಿಗಾಗಿ ಮಹಿಳೆಯರ ದೇಹವನ್ನು ಉಪಯೋಗಿಸಲಾಗುತ್ತದೆ. ಯುರೋಪ್ ದೇಶಗಳಲ್ಲಿ ಹೆಂಗಸರು ಪರಪುರುಷರೊಂದಿಗೆ ಸಂಬಂಧ ಹೊಂದದಿರುವಂತೆ ಛೇಸ್ಟಿಟಿ ಬೆಲ್ಟ್ (ಮಹಿಳೆಯರ ಪಾವಿತ್ರ್ಯವನ್ನು ಕಾಪಾಡಲು ಮಹಿಳೆಯರ ಸೊಂಟಕ್ಕೆ ಬೆಲ್ಟ್‌ಹಾಕಿ ಬೀಗ ಹಾಕುವ ಪದ್ಧತಿ) ಬಳಕೆಯಲ್ಲಿತ್ತು. ಸ್ತ್ರೀಯು ಪುರುಷನ ಸೊತ್ತಾಗಿದ್ದಳು. ಇದು ಇಸ್ಲಾಂಧರ್ಮಕ್ಕೂ ಸಹ ವರ್ಗಾವಣೆಯಾಯಿತು. ವಿವಾಹದ ಹೊರಗಿನ ಲೈಂಗಿಕಸಂಬಂಧಗಳು ಪಾಪಕೃತ್ಯಗಳಾಗಿದ್ದವು. ಇಂತಹ ಸಂಬಂಧಗಳು ಅನೈತಿಕ ಲೈಂಗಿಕಕೃತ್ಯಗಳು. ಎಲ್ಲಾ ಧರ್ಮಗಳು ಪುರುಷ ಪ್ರಾಧಾನ್ಯವನ್ನು ಬೆಂಬಲಿಸುವುದರಿಂದ ಅವು ಸುಲಭವಾದ ರೀತಿಯಲ್ಲಿ ಧಾರ್ಮಿಕ ಸ್ವರೂಪವನ್ನು ಪಡೆಯುತ್ತವೆ. ಸ್ತ್ರೀಯರ ಜನನಾಂಗವನ್ನು ನ್ಯೂನಗೊಳಿಸುವ ಪದ್ಧತಿ ಆಫ್ರಿಕಾದ ಬುಡಕಟ್ಟುಗಳಲ್ಲಿ  ಪ್ರಚಲಿತವಾಗಿದೆ. ಅಮ್ನೆಸ್ಟಿ ಇಂಟರ್ ನ್ಯಾಷನಲ್ ವರದಿಯ ಪ್ರಕಾರ ಇದು ಇಸ್ಲಾಂನ ನಂಬಿಕೆಯಾಗಿರದೆ ಅದೇ ಅಲ್ಲಿಯ ರೂಢಿಗತವಾದ ನಂಬಿಕೆಯಾಗಿತ್ತು. ಇಸ್ಲಾಂ ಧರ್ಮದ ಯಾವ ವಿಚಾರ ಧಾರೆಯೂ ಇದನ್ನು ಧಾರ್ಮಿಕನಂಬಿಕೆಯೆಂದು ಒಪ್ಪುವುದಿಲ್ಲ.

ಅಯ್ಯಾನ್ ಪ್ರಕಾರ ಗೌರವ, ಪ್ರತಿಷ್ಠೆಗಾಗಿ ಹೆಣ್ಣನ್ನು ಬಲಿ ನೀಡುವುದು ಇಸ್ಲಾಂ ಧರ್ಮದಲ್ಲಿರುವ ಸಮಸ್ಯೆ

ಆದರೆ, ಇದಕ್ಕೆ ಮುಖ್ಯ ಕಾರಣ ಜನರಲ್ಲಿರುವ ಅಜ್ಞಾನ ಹಾಗೂ ಹಿಂದುಳಿದಿರುವಿಕೆ. 1700 ಬಿ.ಸಿಯಿಂದಲೇ ಲೈಂಗಿಕ ಅಪರಾಧಗಳಿಗಾಗಿ ಜನರನ್ನು ಕೊಲ್ಲುವ ಪದ್ಧತಿ ಜಾರಿಯಲ್ಲಿತ್ತು. ಹಮ್ಮುರಬಿ ಶಾಸನದ ಪ್ರಕಾರ ಸ್ತ್ರೀಯರ ಕನ್ಯತ್ವ ಆಕೆಯ ಕುಟುಂಬಕ್ಕೆ ಸೇರಿರುವ ಆಸ್ತಿ. 1200 ಬಿ.ಸಿಯಿಂದ 1532ರ ಅವಧಿಯಲ್ಲಿ ಲೈಂಗಿಕ ಅಪರಾಧಕ್ಕಾಗಿ ಅವಳ ಕೈ ಹಾಗೂ ಕಾಲುಗಳನ್ನು ಗೋಡೆಗೆ ಕಟ್ಟಲಾಗುತ್ತಿತ್ತು. ಪುರಾತನ ರೋಮ್ ರಾಜ್ಯದಲ್ಲೂ ಸಹ ಮದುವೆಯಾಗದ ಹುಡುಗಿ ಅಥವಾ ವಿವಾಹವಾದ ಯಾರು ಲೈಂಗಿಕ ಅಪರಾಧವೆಸಗಿದರೂ ಅವರನ್ನು ಕೊಲ್ಲಲಾಗುತ್ತಿತ್ತು. ಪುರಾತನ ಯುರೋಪ್ ದೇಶಗಳಲ್ಲೂ ಸಹ ಲೈಂಗಿಕ ಅಪರಾಧಕ್ಕಾಗಿ ಕಲ್ಲು ಹೊಡೆದು ಸಾಯಿಸಲಾಗುತ್ತಿತ್ತು. ಜೂಯಿಷ್ ಕಾನೂನು ಸಹ ಲೈಂಗಿಕ ಅನೈತಿಕ ಕೃತ್ಯಗಳಿಗಾಗಿ ಪುರುಷರು ಹಾಗೂ ಸ್ತ್ರೀಯರಿಬ್ಬರಿಗೂ ಮರಣ ದಂಡನೆಯನ್ನು ವಿಧಿಸುತ್ತಿತ್ತು.

ಅಮ್ನೆಸ್ಟಿ ಇಂಟರ್ ನ್ಯಾಷನಲ್ 'ಅನೈತಿಕ ಲೈಂಗಿಕ ಚಟುವಟಿಕೆಯಲ್ಲಿ ತೊಡಗುವ ಮಹಿಳೆ ಕುಟುಂಬದ ಗೌರವಕ್ಕೆ ಅಪಖ್ಯಾತಿಯನ್ನು ತರುತ್ತಾಳೆ, ಇದು ಕ್ಷಮಿಸಲಾಗದ ಅಪರಾಧ' ಎಂದಿದೆ. ಆಕೆ ತನ್ನನ್ನು ತಾನು ಸಮರ್ಥಿಸಿಕೊಳ್ಳಲು ಯಾವ ಅವಕಾಶವನ್ನು ನೀಡುತ್ತಿರಲಿಲ್ಲ. ಹೆಣ್ಣನ್ನು ದೂಷಿಸುವುದನ್ನು ಬಿಟ್ಟರೆ ಕುಟುಂಬಕ್ಕೆ ಬೇರೆ ಯಾವುದೇ ದಾರಿ ಇರಲಿಲ್ಲ.

ಇಸ್ಲಾಂನಲ್ಲಿ ಸಹೋದರ ಸಂಬಂಧಿಗಳಲ್ಲಿ ವಿವಾಹಕ್ಕೆ ಸಮ್ಮತಿ ನೀಡಲಾಗಿದೆ. ಈ ಪದ್ಧತಿ ಹಲವು ಧರ್ಮ ಹಾಗೂ ಸಂಸ್ಕೃತಿಗಳಲ್ಲಿಯೂ ಚಾಲ್ತಿಯಲ್ಲಿದೆ. ಜ್ಯೂಗಳಲ್ಲಿ, ಜೊರಾಸ್ಟ್ರಿಯನ್ ಜನಾಂಗಗಳಲ್ಲಿ ಹಾಗೂ ದಕ್ಷಿಣ ಭಾರತದ ಕೆಲವು ರಾಜ್ಯಗಳಲ್ಲಿರುವಂತೆ ತಾಯಿಯ ಕಡೆಯ ಸಂಬಂಧಗಳಲ್ಲಿ ವಿವಾಹ ಏರ್ಪಾಡಾಗುತ್ತದೆ. ಮರಾಠಿ, ಕುನಬಿ, ಮಾಲಿ ಮಹಾರ್‌ಗಳಲ್ಲಿ ಸಹ ಸಹೋದರನ ಮಗಳ ವಿವಾಹವನ್ನು ಸಹೋದರಿಯ ಮಗಳೊಂದಿಗೆ ನಡೆಸಲಾಗುತ್ತದೆ. ಅರಬ್‌ದೇಶಗಳಲ್ಲಿ ಹಲವಾರು ಬುಡಕಟ್ಟುಗಳಿರುವುದರಿಂದ ಸಹೋದರಿಕೆಯ ಸಂಬಂಧ ಗಳಲ್ಲಿ ವಿವಾಹಗಳು ಪುರಾತನ ಕಾಲದಿಂದಲೂ ಸರ್ವೇಸಾಮಾನ್ಯ ವಾಗಿದ್ದವು.

ಬಹಳಷ್ಟು ಪ್ರದೇಶಗಳಲ್ಲಿ ಜನಾಂಗಗಳ ಜೀವನಕ್ರಮವು ಸ್ಥಳೀಯ ಸಂಪ್ರದಾಯ, ಪದ್ಧತಿ, ಕಾನೂನು, ಧಾರ್ಮಿಕನಂಬಿಕೆಯ ಆಧಾರದಮೇಲೆ ರೂಪಿತವಾಗಿರುತ್ತದೆ. ಬೆಂಗಾಳಿಮುಸ್ಲಿಂಜನಾಂಗದ ಜನಜೀವನವು ಬೆಂಗಾಳಿಹಿಂದೂಗಳ ಜೀವನಶೈಲಿಯೊಂದಿಗೆ ಸಾಮ್ಯತೆಯನ್ನು ಕಾಣಬಹುದೇ ವಿನಃ ಅರಬ್‌ಮುಸ್ಲಿಂ ಜೀವನ ಶೈಲಿಯೊಂದಿಗಲ್ಲ. ಧರ್ಮ ಹಾಗೂ ಸಂಸ್ಕೃತಿ ಭಿನ್ನವಾದ ವಿಷಯಗಳು. ಕೆಲವೊಮ್ಮೆ ಧರ್ಮ ಸ್ಥಳೀಯ ಸಂಸ್ಕೃತಿಯನ್ನು ನುಂಗಿಹಾಕಬಹುದು. ಮಹಿಳಾ ವಿರೋಧಿ ಅಂಶಗಳನ್ನುಳ್ಳ ಮೂಢನಂಬಿಕೆ, ಧೋರಣೆ ಮುಂತಾದವುಗಳನ್ನು ಅಳವಡಿಸಿಕೊಂಡಿದ್ದು ಧರ್ಮದ ತಪ್ಪಲ್ಲ. ಅದನ್ನು ಪ್ರತಿಭಟಿಸದೇ ಒಪ್ಪಿಕೊಂಡಿರುವುದು ಜನರ ತಪ್ಪು. ಅಯ್ಯಾನ್ ಇವುಗಳ ಮೂಲವನ್ನು ಸಾರಾಸಗಟಾಗಿ ಇಸ್ಲಾಂಧರ್ಮದಲ್ಲಿ ಹುಡುಕುತ್ತಾರೆ. ಆದರೂ ಆಕೆ ಬಹು ಮುಖ್ಯವಾದ ಪ್ರಶ್ನೆಗಳನ್ನು ಎತ್ತುತ್ತಾರೆ. ನೆದರ್‌ಲ್ಯಾಂಡಿನಲ್ಲಿ ನೆಲೆಸಿರುವ ಮುಸ್ಲಿಂ ಮಹಿಳೆಯರ ಪರವಾಗಿ ಅಯ್ಯಾನ್ ಹೋರಾಟ ನಡೆಸಿದ್ದಾರೆ. ಅವರಿಗೆ ನೆರವು ನೀಡಿದ್ದಾರೆ. ಆಕೆಯ ಈಕೃತಿ ತುಳಿತಕ್ಕೆ ಒಳಗಾಗಿರುವ ಮಹಿಳೆಯರಿಗೆ ಮಾರ್ಗದರ್ಶನ ನೀಡುತ್ತಿದೆ.

ಅಯ್ಯಾನ್ ಮೂಲಭೂತವಾದವನ್ನು ಪ್ರಶ್ನಿಸಿರುವ, ಮಹಿಳೆಯರ ಮೇಲೆ ನಡೆದ ದೌರ್ಜನ್ಯ ಕುರಿತು ಬರೆದ ಅಧ್ಯಾಯ ಮನಮಿಡಿಯು ವಂತಿದೆ. ಇಂದೂ ಸಹ ಇದು ಮುಂದುವರಿಯುತ್ತಲೇ ಇದೆ. ಪ್ರಪಂಚದ ಯಾವುದೇ ಮೂಲೆಯಲ್ಲಿ ಮಹಿಳೆ ಮೂಲಭೂತವಾದದ ವಿರುದ್ಧ ದನಿ ಎತ್ತಿದರೆ ಪುರುಷಪ್ರಧಾನ ಸಮಾಜ ಹಾಗೂ ಧಾರ್ಮಿಕ ನೇತಾರರು ಆಕೆಯನ್ನು ಸಂಪೂರ್ಣ ಛಿದ್ರಗೊಳಿಸುತ್ತಾರೆ.

ಅಯ್ಯಾನ್‌ಳ ಈ ಪ್ರಯತ್ನ ಶ್ಲಾಘನೀಯ. ಮುಸ್ಲಿಂ ಜನಾಂಗಗಳಲ್ಲಿ ಈಕೆ ಜನಿಸಿದ್ದರೂ ಇಸ್ಲಾಂಧರ್ಮವನ್ನು ವಿಮರ್ಶಿಸುವಲ್ಲಿ ತೋರಿಸಿರುವ ಧೈರ್ಯವನ್ನು ಮೆಚ್ಚಲೇಬೇಕು. ಬಹುಪಾಲು ಮಹಿಳೆಯರು ಉಸಿರುಕಟ್ಟಿ ನರಳುತ್ತಿರುವಾಗ ನಮ್ಮ ಸಂಗಾತಿಯಾಗಿ ಆಕೆ ಪ್ರತಿಭಟಿಸುತ್ತಿರುವುದು ಒಂದು ಮಹತ್ವದ ಆಶಾಕಿರಣ. ಮುಸ್ಲಿಂ ಜನಾಂಗದವರೇ ತಮ್ಮ ಜನಾಂಗದ ಜನರಲ್ಲಿ ವೈಜ್ಞಾನಿಕ ಮನೋಭಾವನೆ, ಸಮಾನತೆ, ಜಾತ್ಯತೀತಮನೋಭಾವನೆ ಬೆಳೆಸುವ ಜವಾಬ್ದಾರಿಯನ್ನು ವಹಿಸಿಕೊಳ್ಳ ಬೇಕು. ಬದಲಾವಣೆ ನಮ್ಮೊಳಗಿನಿಂದ ಬರಬೇಕು. ಒತ್ತಡದಿಂದ ಹೇರಲು ಸಾಧ್ಯವಿಲ್ಲ. ಇದೇ ರೀತಿಯಲ್ಲಿ ಮಹಿಳಾ ಸ್ವಾತಂತ್ರ್ಯವನ್ನೂ ಹೊರಗಡೆ ಯಿಂದ ಹೇರಲು ಸಾಧ್ಯವಿಲ್ಲ. ನಮ್ಮಲ್ಲಿರುವ ಮೌಢ್ಯವನ್ನು ಕಳೆದುಕೊಳ್ಳದೇ ಸಮಾನತೆಯತ್ತ ಹೆಜ್ಜೆ ಹಾಕಲೂ ಸಾಧ್ಯವಿಲ್ಲ.

ಪುರುಷ ಸುಧಾರಣಾವಾದಿಗಳು ಹೆಚ್ಚು ಅಪ್ರಯೋಜಕರು, ನಿರ್ವಹಿಸುತ್ತಿಲ್ಲ. ಮುಸ್ಲಿಂ ಸಮಾಜದಲ್ಲಿನ ಜಿಗುಟುತನವನ್ನು ಕಿತ್ತು ಹಾಕುವುದು ಹೋರಾಟ ಮನೋಭಾವನೆಯ ಸಾವಿರಾರು ಹೆಂಗಸರಿಂದ ಮಾತ್ರ ಸಾಧ್ಯ. ❑

---

*"ಅಂಥ ಶ್ರೀರಾಮನ ಕೈ ಹಿಡಿದ ಮಹಾತಾಯಿ ಸೀತಾ ದೇವಿಯೆಂತ ಸುಖಪಟ್ಲೆ ? ಉದ್ದಕ್ಕೂ ಆಕಿಗೆ ಕಷ್ಟವೇ. ಹೋಗ್ಲಿ ಆ ಗಂಡನಾರಾ ಸುಖ ಕೊಟ್ನೇ? ಪ್ರಪಂಚಕ್ಕೆಲ್ಲಾ ಬೇಕಾದ ದೇವರು ಆ ರಾಮಚಂದ್ರ ಆಕೀನ ಬೆಂಕಿಗೆ ಹಾರಿಸ್ದ. ಬಸುರಿ ಹೆಂಗ್ಸನ್ನ ಕಾಡಿಗೆ ಕಳಿಸ್ದ. ಎಂತ ಪುರಾಣವೋ, ಪುಣ್ಯ ಕಥೆಯೋ – ಅಂತೂ ಮಾಡೂಕೆ ಕಸುಬಿಲ್ಲದೋರು ಬರೆದಿಟ್ಟು, ನಮ್ಮಂಥ ಸೋಮಾರಿಗಳು ಅದನ್ನು ನಂಬೂದು ಅಷ್ಟೇ ಸೈ."*

*(ಫಣಿಯಮ್ಮ, ಪುಟ 100)*

---

ಎಂ.ಕೆ. ಇಂದಿರಾ ಅವರ ಮಲೆನಾಡ ಹೆಣ್ಣುಗಳು ಕಾಡುವಂಥವರು. ಗಟ್ಟಿಗಿತ್ತಿ ಹೆಂಗಸರು, ಮೇಲು ನೋಟಕ್ಕೆ ತಂದೆ–ಗಂಡನ ಅಧೀನರಾಗಿ ಕಂಡರೂ, ಯಾರನ್ನೂ ಯಾವುದಕ್ಕೂ ಆಧರಿಸಿದವರಲ್ಲ. ಏನನ್ನೂ ಸಾಧಿಸಬಲ್ಲವರು, ಶ್ರಮಜೀವಿಗಳು, ದುಡಿದು ದಣಿದವರು, ಗಂಡನ ಕೈ ಕಾದವರಲ್ಲ. ಮನೆಯ ವಿಷಯವೊಂದನ್ನು ಬಿಟ್ಟು ಊರ ರಾಜಕೀಯವನ್ನೆಲ್ಲ ಹರಟೆ ಕುಳಿತ ಗಂಡಂದಿರ ಪಾಲಿನ 'ಗಂಡು' ಕೆಲಸಗಳನ್ನು ಮಾಡಿ ಒಗೆದ ಗಂಡೆದೆಯವರು. ಸ್ವಾವಲಂಬಿಗಳು, ಸ್ವಾಭಿಮಾನಿಗಳು. ಕ್ರಾಂತಿಯ ಯಾವ ಘೋಷಣೆ ಇಲ್ಲದೆ ಕ್ರಿಯೆಯಲ್ಲೆ, ದುಡಿತದಲ್ಲೆ ಬದುಕಿ–ಬಾಳಿದವರು.

*– ನೇಮಿಚಂದ್ರ ('ಸುರಗಿ' ಗ್ರಂಥದಿಂದ)*

# ಲೇಖಕಿಯ ಮನದೊಂದಿಗೆ ಸಾಗಿ...

● ಡಾ॥ ಬಿ.ಎನ್. ಸುಮಿತ್ರಾ ಬಾಯಿ

**"ನನ್ನಮ್ಮ ಬದುಕನ್ನು ಜಗತ್ತನ್ನೂ ಕಂಡ ರೀತಿ ನನ್ನದಕ್ಕಿಂತ ಬೇರೆಯೇ. ಆಕೆ ಒಬ್ಬ ಆಂಥ್ರೋಪಾಲಜಿಸ್ಟ್ ಆಗಿ ತಮ್ಮ ವೃತ್ತಿ ಜೀವನದಲ್ಲಿ ಅವರು ಬರೆದಿದ್ದು, ಸಾಧಿಸಿದ್ದು ತುಂಬ ಪ್ರತಿಭಾಪೂರ್ಣ ವಾದದ್ದೇ ಆಗಿದ್ದರೂ ಅವೆಲ್ಲ ಆಕೆಯ ಸ್ವಂತ ವಿಕಾಸದ ಒಂದು ಭಾಗವಷ್ಟೇ ಹೊರತು ಮಹಿಳೆಯರ ಸಮಸ್ಯೆಗೆ ಹೊಂದಿಕೊಂಡಿದ್ದಲ್ಲ. ಆಕೆ ಮೂಲಭೂತವಾಗಿ ಸಂಪ್ರದಾಯ ವಾದಿಯಾಗಿದ್ದರೇ ಹೊರತು ಸ್ತ್ರೀವಾದಿಯಲ್ಲ. ನಮ್ಮ ದೃಷ್ಟಿಗಳ ಭಿನ್ನತೆ ಬಹುಶಃ ತಲೆಮಾರಿನ ಅಂತರವೋ? ನನಗೆ ತಿಳಿಯದು. ಹೀಗಾಗಿ ನನ್ನ ಬರಹದ ಕಾಲದಲ್ಲಿ ನಾನು ಎಷ್ಟರಮಟ್ಟಿಗೆ ಅವರ ನೆರಳಿನಲ್ಲೇ ಬೆಳೆದಿದ್ದೆನೆಂಬುದು ನನ್ನ ಅರಿವಿಗೆ ಬಂದಿತು."**

ಮರಾಠಿಯ ಭಾಷೆಯಲ್ಲಿ ಸುಪ್ರಸಿದ್ಧ ಮಾನವಶಾಸ್ತ್ರಜ್ಞೆ ಇರಾವತಿ ಕರ್ವೆಯವರ ಬಗ್ಗೆ ಅವರ ಮಗಳಾಗಿ, ಅಷ್ಟೇ ವಿಖ್ಯಾತ ಲೇಖಕಿಯಾಗಿರುವ ಗೌರಿ ದೇಶಪಾಂಡೆಯವರು ಒಂದು ಸಂದರ್ಶನದಲ್ಲಿ ಹೇಳಿರುವ ಮಾತು. ಪ್ರತಿ ಹೊಸಪೀಳಿಗೆಯ ಮಗಳಿಗೆ ತನ್ನ ತಾಯಿ ಹೀಗೆಯೇ ಹಳೆಯ ವಿಚಾರಗಳ ಪ್ರತಿನಿಧಿಯೆಂದು ಒಮ್ಮೆಯಾದರೂ ಅನ್ನಿಸಬಹುದೇನೋ. ಆದರೆ "ಯುಗಾಂತ" ದಂತಹ ತುಂಬ ಚರ್ಚೆಗೆ, ಖ್ಯಾತಿಗೂ ಒಳಗಾದ ಸಂಶೋಧನಾ ಕೃತಿಯನ್ನು ರಚಿಸಿದ ಇರಾವತಿ ಕರ್ವೆ, ಅದ್ಭುತ ರೀತಿಯಲ್ಲಿ ಸೀತೆಗೂ ದ್ರೌಪದಿಗೂ ಇರುವ ಸಾಮ್ಯಗಳನ್ನು ಸಾಕ್ಷ್ಯಾಧಾರದ ಸಮೇತ ಅನಾವರಣಗೊಳಿಸುವ ರೀತಿ ಇಂದಿಗೂ ಆಶ್ಚರ್ಯ ಹುಟ್ಟಿಸುತ್ತದೆ. ಆದರೂ ಅವರ ಬವಣೆಗಳಿಗೂ ವರ್ತಮಾನದ ಬದುಕಿಗೂ ಏನಾದರೂ ಸಂಬಂಧವಿದೆ ಎಂಬುದು ಇರಾವತಿಯವರನ್ನು ಕಾಡಿದೆಯೇ ಎಂಬುದು ಅನುಮಾನಾಸ್ಪದವೇ. ಆದ್ದರಿಂದ ಗೌರಿಯವರು ತಮ್ಮ ತಾಯಿ ಮಹಾಭಾರತದ ಪೌರಾಣಿಕ ಕಥೆಗಳು ಸಮಕಾಲೀನ ಬದುಕಿಗೆ ಮೌಲಿಕವೋ ಅಲ್ಲವೋ ಎಂಬುದನ್ನು ಪೂರ್ತಿಯಾಗಿ ನಿರ್ಲಕ್ಷಿಸಿದ್ದಾರೆ ಎಂದು ಹೇಳಿರುವುದರಲ್ಲಿ ನಿಜವಿದೆ.

ಗೌರಿ ದೇಶಪಾಂಡೆ ಹುಟ್ಟಿದ್ದು ಸಮಾಜ ಸುಧಾರಕ ಮಹರ್ಷಿ ಕರ್ವೆಯಂಥ ಅಜ್ಜ, ಇರಾವತಿ ಕರ್ವೆಯಂಥ ತಾಯಿ, ರಾಧೋ ಅವರಂಥ ತೀವ್ರಕ್ರಾಂತಿಕಾರಿ ಸೋದರ ಮಾವ ಮುಂತಾದವರ ವಿಖ್ಯಾತ ಮನೆತನದಲ್ಲಿ. ಹಾಗಾಗಿ ಅವರಿಗೆ ನಮ್ಮ ನಾಡಿನ ಸಂಪ್ರದಾಯಸ್ಥ ಪರಿಸರದಿಂದ ಬರೆಯಲು ಹೊರಡುವ ಮಹಿಳಾ ಬರಹಗಾರರಿಗೆ ಎದುರಾಗುವ ಒಳಗಿನ-ಹೊರಗಿನ ದಿಗ್ಬಂಧನಗಳ ತೀವ್ರತೆಯ ಅರಿವು ಇದೆಯೋ ಇಲ್ಲವೋ. ಏಕೆಂದರೆ ಅವರೇ ಹೇಳುವಂತೆ ಅವರ ಕುಟುಂಬದಲ್ಲಿ ಸಂಪ್ರದಾಯ ಪರತೆಯ ಸಹಜ ಕೌಟುಂಬಿಕ ವಾತಾವರಣವೇ ಇತ್ತು. ಆದರೂ ಆ ಕುಟುಂಬದ ಸದಸ್ಯರೆಲ್ಲ ತಮ್ಮೊಳಗೇ ಸ್ವತಂತ್ರ ವಿಚಾರಗಳುಳ್ಳವರೂ, ಪ್ರಗತಿವಾದಿಗಳೂ ಬಂಧನಗಳನ್ನು ಮುರಿಯುವವರೂ ಆಗಿದ್ದವರೇ. ಪ್ರಪಂಚವನ್ನೆಲ್ಲ ಸುತ್ತಾಡಿ ಬಂದವರಿದ್ದರು, ವಿದೇಶಗಳ ಅತ್ಯುತ್ತಮ ವಿಶ್ವ ವಿದ್ಯಾಲಯಗಳಲ್ಲಿ ಕಲಿತವರಿದ್ದರು. ಪಾಶ್ಚಾತ್ಯ ಶಿಕ್ಷಣ ಹಾಗೂ ಸಂಸ್ಕೃತಿಯಲ್ಲಿನ ಒಂದು ಉದಾರ ಚಿಂತನೆ ಅವರೊಳಗೂ ಮೈಗೂಡಿದ್ದಿರ ಬಹುದೋ ಏನೋ. ಅವರೆಲ್ಲ ತಮ್ಮ ಯುಗಕ್ಕೆ ಮೀರಿದ ಪ್ರಗತಿ ಪರತೆಯನ್ನು ತೋರಿದವರು. ಬರೀ ಬೌದ್ಧಿಕ ವಿಚಾರಕ್ಕೆ ಅವರ ಪ್ರಗತಿಪರತೆ ಸೀಮಿತವಾಗಿರದೆ ದೈನಂದಿನ ಬದುಕುಗಳಲ್ಲಿ ಅವುಗಳನ್ನು ಕಾರ್ಯರೂಪಕ್ಕೆ ತಂದಿದ್ದುದು ಅವರ ವೈಶಿಷ್ಟ್ಯ. ಇಂಥ ಕುಟುಂಬದೊಳಗೆ ಮಹಿಳೆಯರನ್ನು ಸಮನಾಗಿ ನಡೆಸಿಕೊಳ್ಳುವ ಸಂಸ್ಕಾರವೊಂದು ಏರ್ಪಟ್ಟಿದ್ದು ಬಹುಶಃ ಅಂದಿನ ಪಾಶ್ಚಾತ್ಯ ಶಿಕ್ಷಣದ ಫಲವೇ ಇರಬೇಕೆಂದು ಗೌರಿಯವರು ಹೇಳುತ್ತಾರೆ :

> **"ನನ್ನ ತಂದೆ ತಾಯಿಗಳಿಂದ ನಾನು ಕಲಿತ ಬಹುಮುಖ್ಯ ಸಂಗತಿಯೆಂದರೆ ಒಂದು ನಿರ್ಧಾರ ನೀವು ಮಾಡಿದಾಗ, ಅದು ಸರಿ ಎಂದು ನಿಮಗೆ ಖಚಿತವಾಗಿದ್ದರೆ ಸಾಕು. ಅದನ್ನು ನಡೆಸುವುದು ಅಥವಾ ನಡೆಸದಿರುವುದು ಸರಿಯೇ ಆಗಿರುತ್ತದೆ. ಎಲ್ಲಿಯವರೆಗೂ ಯಾವುದೇ ಅಪರಾಧ ನೀವು ಮಾಡುವುದಿಲ್ಲವೋ ಅಲ್ಲಿಯವರೆಗೂ ನೀವು ಮುನ್ನಡೆಯಬಹುದು. ಆದರೆ ನಿಮ್ಮ ನಂಬಿಕೆಗಳನ್ನು ಎತ್ತಿ ಹಿಡಿದಿದ್ದಕ್ಕಾಗಿ ಎದುರಾಗುವ ಪರಿಣಾಮಗಳನ್ನು ಎದುರಿಸುವುದಕ್ಕೂ ನೀವು ಸಿದ್ಧರಿರಬೇಕು. ಎನ್ನುವುದು. ಇದನ್ನೇ ನಾನು ನನ್ನ ಬರಹಗಳಲ್ಲೂ ಬಹುವಾಗಿ ಹೇಳಲೆತ್ನಿಸಿದ್ದೇನೆ."**

ಗೌರಿದೇಶಪಾಂಡೆಯವರ ಸೋದರಮಾವ ರಾಧೊ ಪ್ರಸಿದ್ಧ ಕಾಂತಿಕಾರ ಮಹರ್ಷಿ ಕರ್ವೆ ಅವರ ಮಗ ಎಂಬುದಷ್ಟೇ ಅಲ್ಲ, ತಮ್ಮ ಕಾಲಕ್ಕಿಂತ ತುಂಬ ಮುಂದಿದ್ದ ಕ್ರಾಂತಿಕಾರಿ ಲೇಖಕರವರು. ಲೈಂಗಿಕತೆಯನ್ನೂ ನೈತಿಕತೆಯನ್ನು ತಳುಕು ಹಾಕಬಾರದೆಂದು ಗೌರಿ ಅರಿತದ್ದೇ ತಮ್ಮ ಮಾವನವರ ಪ್ರಭಾವದಿಂದ. ಕಾಮ ಕೂಡ ನಾವು ತಣಿಸಲೇಬೇಕಾದ ಹಸಿವುಗಳಲ್ಲಿ ಒಂದು. ಈ ಹಸಿವನ್ನು ತೃಪ್ತಿಪಡಿಸಲು ನಾವು ಯಾವ ದಾರಿಯನ್ನು ಅನುಸರಿಸಿದರೂ ಅದನ್ನು ನಿಯಂತ್ರಿಸಲು, ಒಂದು ಕಾಲುವೆಯನ್ನು ಅದಕ್ಕೆ ಒದಗಿಸಲು ಸಮಾಜ ಅನೇಕ ವಿಧಾನಗಳನ್ನು ಬಳಸುತ್ತಿರುತ್ತದೆ. ಈ ಹಸಿವಿನ ಸಂತೃಪ್ತಿಗಾಗಿ ಸ್ವತಂತ್ರ ದಾರಿಗಳನ್ನು ಅನುಸರಿಸಿದರೆ ಮಾನಸಿಕವಾಗಿ, ಭಾವನಾತ್ಮಕವಾಗಿ ಹಾಗೂ ದೇಹಾರೋಗ್ಯದ ದೃಷ್ಟಿಯಿಂದಲೂ ದುಬಾರಿ ಬೆಲೆಯನ್ನೇ ತೆರಬೇಕಾದೀತು ಎಂದು ಯೋಚಿಸುವವರೆಲ್ಲ ಸಮಾಜ ಒಪ್ಪುವಂಥ ಸಾಂಪ್ರದಾಯಿಕ ಚೌಕಟ್ಟಿನೊಳಗೇ ತಮ್ಮ ಆಸೆಯನ್ನು ತಣಿಸಿಕೊಳ್ಳಬಹುದು. ಮಹಿಳೆಯರ ದೃಷ್ಟಿಯಿಂದಲಂತೂ ವಿವಾಹವೊಂದೇ ಅವರ ಲೈಂಗಿಕ ಅಪೇಕ್ಷೆಗಳನ್ನು ತಣಿಸಿಕೊಳ್ಳುವ ಏಕೈಕ ದಾರಿ ಎಂದು ಸಾರುತ್ತಾ ಇತರ ದಾರಿಗಳನ್ನೆಲ್ಲ ಯಾವಾಗಲೂ 'ಅನೈತಿಕ' ವೆಂದೇ ಭಾವಿಸುತ್ತ ಬರಲಾಗಿದೆ. ಮಹಿಳೆಯೊಳಗಿನ ಕಾಮನೆಗಳ ಸಹಜಾಭಿವ್ಯಕ್ತಿಯನ್ನು ಇಂದಿಗೂ ಸಮಾಜ ನಿರ್ಬಂಧಿಸುತ್ತಲೇ ಇದೆ. ಮಹಿಳೆಯರ ಇರವು, ಬದುಕು ಯಾವುದೂ ತಮಗಾಗಿ ಅವರು ಮಾಡುವಂತಿಲ್ಲ. ಏನಿದ್ದರೂ ಅದು ಪುರುಷರಿಗಾಗಿ, ಮನೆಯವರಿಗಾಗಿ ಇಲ್ಲವೆ ಮಕ್ಕಳಿಗಾಗಿ. ಅವರ ಪ್ರತಿಯೊಂದು ಗಳಿಗೆ, ಪ್ರತಿಯೊಂದು ಕ್ರಿಯೆಯೂ ಫೋಕಸ್ಸಿನಲ್ಲಿದ್ದಾಗ ಮಾತ್ರವೇ ಜನ ಅವರ ಬದುಕಿಗೆ ಅರ್ಥವಿದೆಯೆಂದು ಒಪ್ಪುತ್ತಾರೆ. ಈ ಒಪ್ಪಿತ ಮಾದರಿಗೆ ಭಿನ್ನವಾಗಿ ಬದುಕುವವರನ್ನು ಸ್ವಾರ್ಥಿಗಳೆಂದೋ ನೀತಿಗೆಟ್ಟವರೆಂದೋ ನೋಡುತ್ತಾರೆ ಎಂಬುದನ್ನು ವಿಶ್ಲೇಷಿಸುವ ಗೌರಿ

> **"ರಾಧೋ ಅವರಿಂದ ನಾನು ಕಲಿತ ದೊಡ್ಡ ಜೀವನನೀತಿಯೆಂದರೆ ಲೈಂಗಿಕತೆಗೂ ನೈತಿಕತೆಗೂ ಗಂಟುಹಾಕಬಾರದು, ನಿಜವಾಗಿ ಅವು ಒಂದಕ್ಕೊಂದು ಯಾವ ರೀತಿಯಲ್ಲೂ ಸಂಬಂಧಿತವಲ್ಲ ಎಂಬುದೇ ಆಗಿದೆ"**

ಎನ್ನುತ್ತಾರೆ.

ಗೌರಿದೇಶಪಾಂಡೆಯವರು ತಮ್ಮ ಬದುಕನ್ನು ರೂಪಿಸಿಕೊಂಡಿದ್ದೂ ಇದೇ ತಾತ್ವಿಕ ನಿಲುವಿನಿಂದಲೇ. ಅವರ ತಂದೆ–ತಾಯಿಗಳು ಸಾಮಾಜಿಕವಾಗಿ ಎಷ್ಟೇ ಮುಂದುವರೆದವರೆಂದು ಖ್ಯಾತರಾಗಿದ್ದರೂ ಮೂಲದಲ್ಲಿ ಅವರೂ ಸಂಪ್ರದಾಯವಾದಿಗಳೇ. ಗೌರಿಯ ಅಕ್ಕನಿಗೆ ಆಕೆಯ 21ನೆಯ ವಯಸ್ಸಿನಲ್ಲಿ ತಾವೇ ವರನನ್ನು ಗೊತ್ತುಮಾಡಿ ಮದುವೆ ಮಾಡಿದ್ದರು. ಆಗ ಇನ್ನೂ ಹತ್ತೊಂಬತ್ತರ ಹರೆಯದ ಗೌರಿ ತನಗೆ ಒಬ್ಬರಮೇಲೆ ಮನಸಾಗಿದೆಯೆಂದು ಹೇಳಿದ್ದೇ ತಡ ದಡಬಡಾಯಿಸಿ ಆತನೊಂದಿಗೆ ಮಗಳಿಗೆ ಮದುವೆ ಮಾಡಿಬಿಟ್ಟರು. ಗೌರಿಯವರ ತಾಯಿಗೆ ಆರೋಗ್ಯ ಸದಾ ಹದಗೆಡುತ್ತಿತ್ತು, ಯಾವಾಗಲೂ ಅವರು ಸಾವು ಬದುಕಿನ ನಡುವೆ ಹೊಯ್ದಾಡುತ್ತಿದ್ದರು. ಅಂತಹ ಸ್ಥಿತಿಯಲ್ಲಿ ತಡಮಾಡಿದರೆ ಪ್ರೇಮದ ಹೆಸರಲ್ಲಿ ಮಗಳೇನಾದರೂ ಅನಾಹುತ ಮಾಡಿಕೊಂಡುಬಿಟ್ಟರೆ ಎಂಬ ಆತಂಕದಲ್ಲಿ ಅವರು ಮದುವೆಗೆ ಆತುರವಹಿಸಿದರು. ಆದರೆ ಅದೇ ಗೌರಿಯ ಪಾಲಿಗೆ ಕುತ್ತಾಯಿತು.

**"ನಿಜ ಹೇಳಬೇಕೆಂದರೆ ಆ ವ್ಯಕ್ತಿಯೊಂದಿಗಿನ ಸಂಬಂಧದಲ್ಲಿ ಬೆದರಿಕೆ, ಅವಮಾನಗಳಾವುದೂ ಇರಲಿಲ್ಲ. ಆದರೆ ಸದಾ ಸುತ್ತಲಿನ ಗಡಿರೇಖೆಯನ್ನು ಹಿಗ್ಗಿಸಲುಬಾರದ ಒಂದು ಪೆಟ್ಟಿಗೆಯೊಳಗೆ ಕೂಡಿಟ್ಟ ಹಾಗೆ ನನ್ನ ಸ್ಥಿತಿಯಿತ್ತು."**

ಎನ್ನುವ ಗೌರಿ ಎರಡು ಮಕ್ಕಳಾದ ಮೇಲೆ, ಆ ದಾಂಪತ್ಯ ಜೀವನ ಇನ್ನು ಅಸಹನೀಯವೆನಿಸಿದಾಗ, ವಿಚ್ಛೇದನೆ ಪಡೆದರು. ಆ ಗಂಡ ಕೆನಡಾಕ್ಕೆಹೋಗಿ ಬೇರೊಂದು ಮದುವೆಯಾದದ್ದೂ ಆಯಿತು. ಇಬ್ಬರು ಹೆಣ್ಣುಮಕ್ಕಳು ಅಮ್ಮ ಅಪ್ಪಂದಿರ ನಡುವೆ ಹಂಚಿ ಹೋದರು. ಗೌರಿಯವರು ಕತೆಗಳಲ್ಲಿ ಚಿತ್ರಿಸಿರುವ ಮಹಿಳೆಯರು ಸಮಾಜ ಒಪ್ಪದಂಥ ಸಂಬಂಧಗಳಲ್ಲಿ ಬದುಕಿದರೂ ತಮ್ಮನ್ನು ಟೀಕಿಸುವವರೆದುರು ಧೈರ್ಯದಿಂದ

**"ಏಕೆ ನೀವು ನೀತಿಗೆಟ್ಟವಳು ಎಂದು ನನ್ನನ್ನು ಕರೆಯಬೇಕು? ನಾನೇನು ನನ್ನ ಮಕ್ಕಳನ್ನು ಸೂಳೆಗಾರಿಕೆಗೆ ಹಾಕಿದ್ದೀನಾ? ಲಂಚ ಕೊಟ್ಟಿದ್ದೀನಾ? ಅಥವಾ ಕೊಲೆ ಮಾಡಿದ್ದೀನಾ?"**

ಎಂದು ಪ್ರಶ್ನಿಸುವ ದಿಟ್ಟತನ ತೋರುತ್ತಾರೆ. ಹೀಗೆ ಗೌರಿಯವರ ಮಟ್ಟಿಗೆ ಸ್ವಂತದ ಬದುಕಿನ ಅನುಭವದ ಸಾರವೇ ಬರಹದೊಳಗೂ ಪ್ರತಿಫಲಿತವಾಗುತ್ತದೆ.

ಗೌರಿ ದೇಶಪಾಂಡೆ ಒಮ್ಮೆ ಮದುವೆಯಿಂದ ಅನುಭವಿಸಿದ ದಮನದಿಂದ ಹೊರಬಂದರು. ಮುಂದೆ ಮದುವೆಯ ಚೌಕಟ್ಟಿಗೆ ಒಳಗಾಗದೆ ಉಳಿದರು. ಅನೇಕ ಆತ್ಮೀಯ ಗೆಳೆಯರ ಸಂಬಂಧಗಳಲ್ಲಿ ಉಳಿದರು. ಮದುವೆಯಾಗದೆ ಗಂಡಸೊಬ್ಬನೊಡನೆ ಬಾಳುವೆ ಮಾಡುವ ಈ ತಾಯಿಯ ಜೀವನದ ಬಗ್ಗೆ ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಜನರ ಪ್ರತಿಕ್ರಿಯೆ ಹೇಗಿದ್ದೀತೆಂದು ಹೇಳಬೇಕೆ? ಇವರ ಜೊತೆ ಉಳಿದ ಮಗಳು ಊರ್ಮಿಳಾ ಇಂಥ ಹೊತ್ತಿನಲ್ಲಿ ಏನೆಲ್ಲ ಹಿಂಸೆ ಎದುರಿಸಿರಬಹುದು? ಎಂದು ಯಾರಿಗಾದರೂ ಕುತೂಹಲ ಹುಟ್ಟಬಹುದು. ಇವರು ಆಗ ವಾಸಿಸುತ್ತಿದ್ದುದು ಮಧ್ಯಮ ವರ್ಗದ ಒಂದು ಬಡಾವಣೆಯಲ್ಲಿ. ಮುಂಬೈ ಮಹಾನಗರವೇ ಆದರೂ, ಬಡಾವಣೆಗಳೊಳಗಿನ ಮಂದಿಯ ಬದುಕು ಸಾಂಪ್ರದಾಯಿಕತೆಯನ್ನು ಉಲ್ಲಂಘಿಸುವಂಥದ್ದೇನೂ ಆಗಿದ್ದಿಲ್ಲ. ಆ ಜನ ತದುಕಿ, ಪೀಡಿಸಿ ಊರ್ಮಿಳಾಳನ್ನು ಪ್ರಶ್ನಿಸಿ, ಕುಹಕ, ಕಟಕಿಯಾಡುತ್ತಿದ್ದರು. ಆದರೆ ಆ ಮಗಳೂ ತಾಯಿಯಂತೆಯೇ ದಿಟ್ಟೆ, ದಬಾಯಿಸಿ ಬಾಯಿಮುಚ್ಚಿಸುತ್ತಿದ್ದಳು. ಅಗತ್ಯಬಿದ್ದರೆ ಮುಷ್ಠಿಯನ್ನೂ ಬಳಸಿಬಿಡಲು ಹಿಂಜರಿದವಳಲ್ಲ! ಈ ರೀತಿಯಾಗಿ ತಾನು ಹೇಗೇ ಬದುಕಿದರೂ ಕುಟುಂಬದೊಳಗಿನ ಜನ ಯಾವತ್ತೂ ತನಗೆ ಬೆಂಬಲವನ್ನೇ ನೀಡಿದ್ದಾರೆ, ಆ ಒತ್ತಾಸೆಯಿಂದಾಗಿ ತಾನು ತನ್ನ ನಂಬಿಕೆಗೆ ತಕ್ಕಂತೆಯೇ ಬದುಕಲು ಸಾಧ್ಯವಾಗಿದೆ ಎಂದು ಗೌರಿ ಹೇಳುತ್ತಾರೆ. ಗೌರಿಯವರ ಬದುಕನ್ನು ಎಲ್ಲರಿಗೂ ಮಾದರಿ ಎಂದು ವೈಭವೀಕರಿಸುವ ಉದ್ದೇಶದಿಂದ ಇದನ್ನಿಲ್ಲಿ ಬರೆಯುತ್ತಿಲ್ಲ. ಕಳೆದ 70ರ ದಶಕದಿಂದ ಈಚೆಗೆ ಕನ್ನಡ ನಾಡಿನಲ್ಲೂ ಅನೇಕಾನೇಕ ಮಹಿಳೆಯರು, ವಿಶೇಷವಾಗಿ ಸಾಹಿತ್ಯ, ಕಲೆ, ರಂಗಭೂಮಿ ಮತ್ತಿತರ ವೃತ್ತಿಪರ ಕ್ಷೇತ್ರಗಳಲ್ಲಿ ಸಾಕಷ್ಟು ಸಾಧನೆ ಮಾಡಿರುವವರಿಗೆ ಎದುರಾಗಿರುವ ಸಮಸ್ಯೆ ಇಂಥದೇ ಆಗಿದೆ. ಪರಂಪರಾಗತವಾದ ಮದುವೆಯ ಕ್ರಮವನ್ನೇ ಒಪ್ಪಲಿ ಅಥವಾ ಇಷ್ಟಪಟ್ಟು ಪ್ರೀತಿಸಿ ಸಿವಿಲ್ ವಿಧಾನದಿಂದಲೇ ಮದುವೆಯಾದವರಿರಲಿ, ಮದುವೆ ಮದುವೆಯೇ. ಅದು ವ್ಯಕ್ತಿಗಳನ್ನು ಒಬ್ಬರು ಇನ್ನೊಬ್ಬರಿಗೆ ಸೇರಿಹೋದವರೆಂದೇ ನಂಬಿಸುವ ಸಂಸ್ಥೆ. ಸ್ತ್ರೀಯೇ ಆಗಲಿ, ಪುರುಷನೇ ಆಗಲಿ, ಈ ಅಧೀನತೆಯ ಚೌಕಟ್ಟನ್ನು ಒಪ್ಪಿದರೆ ಮಾತ್ರ ಆ ಸಂಸ್ಥೆ ಉಳಿಯುತ್ತದೆ. ಇಲ್ಲದಿದ್ದರೆ, ಬಿಡಿ ಬಿಡಿ ವ್ಯಕ್ತಿಗಳಾಗಿ ತಮ್ಮ ಸರ್ವಶಕ್ತಿಯನ್ನೂ ಗಳಿಸಿಕೊಳ್ಳಬೇಕೆಂದು ಹಂಬಲಿಸುವವರಾದರೆ ಮದುವೆಯ ಸಂಕೋಲೆ ಕಳಚಿ ಬೀಳುವುದು ಅನಿವಾರ್ಯವಾಗಬಹುದು. ಹೊರಗಿನ ಜಗತ್ತಿಗೆ ಅಂಜಿ ಒಟ್ಟಿಗೇ ಉಳಿದರೂ 'ಆಚಾರ ಕೆಟ್ಟರೂ ಆಕಾರ ಕೆಡಬಾರದು' ಎಂಬ ಅನುಕೂಲವಾದಿ ಧೋರಣೆಯಿಂದ ಅವರು ಆತ್ಮವಂಚನೆಯಲ್ಲೇ ಬದುಕುತ್ತಾರೆ. ಆದರೆ ಎಷ್ಟು ಮಂದಿ ಗೌರಿಯ ಹಾಗೆ ತಮ್ಮೊಳಗಿನ ಪ್ರತಿಭೆಯ ಸಮರ್ಪಕ ಆವಿಷ್ಕಾರವೇ ಮುಖ್ಯವೆಂದು ಸಾರಿಹೇಳಿ ಸೋಗಿನ ಹೊಂದಾಣಿಕೆಯಿಂದ ಹೊರಬರಲು ಸಿದ್ಧರಿರುತ್ತಾರೆ? ಹೊರಬಂದು ಹೊರ ಜಗತ್ತಿಗೆ ಜಗ್ಗದೆ ಮುಖಾಮುಖಿ ಆಗಬಲ್ಲರು? ಎಂಬುದು ಅವರವರ ಮಾನಸಿಕ ಪ್ರಬುದ್ಧತೆಗೆ ಬಿಟ್ಟ ಪ್ರಶ್ನೆ.

ಗೌರಿದೇಶಪಾಂಡೆಯವರ ಮಟ್ಟಿಗೆ ಹೇಳುವುದಾದರೆ, ಅವರಿಗೆ ನಂಬಿಕೆ, ಬದುಕು, ಬರಹ ಬೇರೆ ಬೇರೆ ಅಲ್ಲ. ಅವರ ಮಗಳೂ ಒಬ್ಬ ಯುವಕನನ್ನು ಮೆಚ್ಚಿ, ಅವರಿಬ್ಬರೂ ತಾವು ಮದುವೆಯಾಗಲು ನಿರ್ಧರಿಸಿರುವುದಾಗಿ ಇವರಿಗೆ ತಿಳಿಸಿದಾಗ 'ಮದುವೆಯಾಗಲೇ ಬೇಕು ಎಂದು ಏಕೆ ಬಯಸುತ್ತೀರಿ ನೀವು?' ಎಂದು ಈ ತಾಯಿ ಪ್ರಶ್ನಿಸಿದ್ದರು. ತಮಗೆ ಮಕ್ಕಳು ಬೇಕಾಗಿದೆ, ಅದಕ್ಕಾಗಿ ಮದುವೆಯಾಗುತ್ತಿರುವುದಾಗಿ ಆ ಯುವ ಜೋಡಿ ಉತ್ತರಿಸಿತು. ಗೌರಿ ಹೇಳಿದ ಮಾತೇನು ಗೊತ್ತೆ?

**"ಮದುವೆ ಆಗದಿದ್ದರೂ ಮಕ್ಕಳನ್ನು ಹೊಂದಲು ನೀವು ಆಶಿಸಿದರೆ ನಾನು ಅದನ್ನು ಮನಃಪೂರ್ವಕವಾಗಿ ಬೆಂಬಲಿಸುತ್ತೇನೆ"**

ಎಂಬುದು ಅವರ ಮಾತು. ಇದು ಹೋದ ಶತಮಾನದ 70ರ ದಶಕದ ಸಂಗತಿ. ಆಗ ನಮ್ಮ ಸಮಾಜದಲ್ಲಿ, ಮಹಾನಗರದಲ್ಲೂ ಜನ ಅವಿವಾಹಿತ ತಾಯಂದಿರನ್ನು ಒಪ್ಪಲು ಸಿದ್ಧವಾಗಿರಲಿಲ್ಲ ಎಂಬುದನ್ನು ಗಮನಿಸಬೇಕು. ಈಗ ಆಧುನಿಕತೆ, ಸ್ವಂತದ ಸೃಜನಶೀಲ ಸ್ವಾತಂತ್ರ್ಯಗಳನ್ನು ಆಯ್ದುಕೊಳ್ಳುವ ಅನೇಕ ಮಹಿಳೆಯರು ಇಂಥ ರೀತಿಗಳಲ್ಲಿ ಬದುಕುವುದನ್ನು ಕಲಿತಿದ್ದಾರೆ. ಆದರೆ 35 ವರ್ಷಗಳ ಹಿಂದೆಯೇ ಗೌರಿ ಹಾಗಿದ್ದರು. ಈ ಬಗೆಯ ಒಳಗಿನ ದಿಟ್ಟತನವೊಂದು ಅವರಿಗೆ ಅವರ ಕುಟುಂಬದಿಂದಲೇ ರೂಪುಗೊಂಡ ವ್ಯಕ್ತಿತ್ವದ ಭಾಗವೇ ಆದ ಗುಣವಾಗಿತ್ತು.

ಸಾಮಾನ್ಯವಾಗಿ ಕನ್ನಡ ಸಾಹಿತ್ಯದ ವಿಮರ್ಶಕವರ್ಗ ನಮ್ಮ ಮಹಿಳೆಯರ ಬರಹಗಳೊಳಗಿನ ಸಾಂಪ್ರದಾಯಿಕ ಬಿಗಿತಗಳಿಂದ ಹೊರಬರಲಾರದೆ ಬಿಕ್ಕುವ ಸಂಕೋಚಶೀಲತೆಯನ್ನು ಅವರೇಕೆ ಮೀರಬಾರದು? ಮರಾಠಿಯಲ್ಲಿ ಲೇಖಕಿಯರೆಷ್ಟು ಧೈರ್ಯದಿಂದ ತಮ್ಮ ಅನುಭವಕ್ಕೆ ಅಭಿವ್ಯಕ್ತಿ ಕೊಡುತ್ತಾರೋ ಅಂಥ ಧೈರ್ಯ ಕನ್ನಡಿತಿಯರಲ್ಲೇಕೆ ಕಾಣುವುದೇ ಇಲ್ಲ ಎಂದು ಟೀಕಿಸುವುದು ಸಾಮಾನ್ಯ. ಆದರೆ ಕನ್ನಡ ನಾಡಿನಲ್ಲಿ ಎಂದೂ ಮಹಾರಾಷ್ಟ್ರದಲ್ಲಾದಂಥ ಸ್ತ್ರೀಯರ ಪ್ರಗತಿಯ

ಕಡೆಗಿನ ಸುಧಾರಣಾ ಕ್ರಾಂತಿಗಳು ಆಗಿಯೇ ಇಲ್ಲ ಎಂಬುದನ್ನು ಮಾತ್ರ ಇಂತಹ ಟೀಕಾಚಾರ್ಯರು ಅರಿತಿರುವುದಿಲ್ಲ.

ಗೌರಿದೇಶಪಾಂಡೆ 'ಗಂಡಸರಂತೆ ದಿಟ್ಟತನದಿಂದ ಬರೆಯುತ್ತಾರೆ' ಎಂದು ಅಲ್ಲಿನ ವಿಮರ್ಶಕರು ಹೇಳುವ ಮಾತುಗಳಿಗೆ ಆ ಲೇಖಕಿಯ ಪ್ರತಿಕ್ರಿಯೆ ಕೂಡ ನಮಗೆ ಅಭ್ಯಾಸಕ್ಕೆ ಯೋಗ್ಯವಾಗಿದೆ.

**"ಅದೆಲ್ಲ ಬರಿಯ ಭ್ರಮೆ. ಅದಕ್ಕೆ ವಿರುದ್ಧವಾಗಿ ನಾವು ಬರೆಯುವುದು ಮಹಿಳೆಯಂತೆಯೇ. ಈ ಬದುಕೂ, ಅದರ ಅನುಭವಗಳೆಲ್ಲ ನನ್ನ ರೀತಿಯಲ್ಲೇ ನನಗೆ ಅರಿವಿಗೆ ಬರುವುದು ನಾನು ಹೆಣ್ಣಾಗಿರುವುದರಿಂದಲೇ. ಈ ಅನುಭವಗಳಲ್ಲಿ ಗಂಡಸಾಗಿರುವುದನ್ನು ನಾನು ತಿರಸ್ಕರಿಸುತ್ತೇನೆ. ನನ್ನ ಅನೇಕ ಒಳ್ಳೆಯ ಸ್ನೇಹಿತರನ್ನು, ನನ್ನ ಗಂಡಂದಿರನ್ನೂ ನಾನು ಒಪ್ಪಿರುವುದೇಕೆಂದರೆ ಅವರನ್ನು ನೆಟ್ಟಗೆ ಮಾಡಲು ನಾನೂ ಕೈ ಹಾಕಿದ್ದೇನೆ ಎಂಬುದಕ್ಕಾಗಿ ! ಆದ್ದರಿಂದ ಹೇಗೆ ನಾನು ಗಂಡಸರಂತೆ ಬರೆಯಲು ಸಾಧ್ಯ?"**

ಕನ್ನಡದ ಬರಹಗಾರ್ತಿಯರಲ್ಲಿ ಅನೇಕ ಆಂತರಿಕ ಗೊಂದಲಗಳಿವೆ. ಬಹಳಷ್ಟು ಸಲ ಅವರು ತಮಗೇ ತಾವು ಮುಖಾಮುಖಿಯಾಗಲಿಕ್ಕೂ ಅಂಜಿರುತ್ತಾರೆ. ಆದ್ದರಿಂದಲೇ ಮಹಿಳಾ ಬರಹಗಾರಿಕೆಗಾಗಿ ಸ್ತ್ರೀವಾದಿ ಚಿಂತನೆ, ವಿಮರ್ಶೆಗಳು ತಮ್ಮನ್ನು ಗುರುತಿಸಲು ಎಂದು ಒಂದು ಅಪೇಕ್ಷೆಯಿದ್ದರೂ, ಮಹಿಳಾ ವಿಮರ್ಶಕರಿಗಿಂತ ಪುರುಷರ ಬೆನ್ನು ತಟ್ಟುವ ಮಾತುಗಳೇ ತಮಗೆ ಮುಖ್ಯವೆಂದೂ ಭಾವಿಸುತ್ತಾರೆ. ಹಾಗೆಯೇ ಮಹಿಳಾಪರವಾದ ಪ್ರಗತಿಪರ ಚಳವಳಿಗಳಿಂದಾಗಿಯೇ ಅವರ ಬರಹಗಳಿಗೆ ಒಂದು ಮಾನ್ಯತೆ, ಚರಿತ್ರೆಯಲ್ಲಿ ಸ್ಥಾನ, ಸಾಮಾಜಿಕವಾದ ಮನ್ನಣೆಗಳೆಲ್ಲ ಸಿಗಲು ಕಾರಣವಾಗಿದ್ದರೂ, 'ನಾನಂತೂ ಸ್ತ್ರೀವಾದಿ ಎಂದು ನನ್ನನ್ನು ಗುರುತಿಸಿಕೊಳ್ಳಬಯಸುವುದಿಲ್ಲ' ಎಂದು ಹೇಳಿಕೆಗಳನ್ನು ನೀಡುವವರಿಗೂ ಕೊರತೆಯಿಲ್ಲ. ಸಾಂಪ್ರದಾಯಿಕ ಪರಿಧಿಗಳೊಳಗೆ ಇಬ್ಬಂದಿತನಗಳನ್ನು ಅರಗಿಸಿಕೊಂಡು ಒಳ್ಳೆಯ ತಾಯಿ, ಒಳ್ಳೆಯ ಗೃಹಿಣಿ, ಒಳ್ಳೆಯ ವೃತ್ತಿನಿರತೆ ಮುಂತಾದ ಕ್ಲೀಷೆಯಾಗಿಹೋಗಿರುವ ಬಾಲಂಗೋಚಿ ಪದವಿ ಪಟ್ಟಗಳ ಹೊರಗೆ ಜಿಗಿಯಬಲ್ಲ ಧೀರತನದ ಅಭಾವ ಎಲ್ಲಿಯವರೆಗೆ ನಮ್ಮಲ್ಲಿರುವುದೋ ಅಲ್ಲಿಯವರೆಗೂ ನಾವು ಸೃಜನಶೀಲತೆಯ ನೆಲೆಯಲ್ಲಿ ಸ್ವತಂತ್ರರೂ ಮುಕ್ತರೂ ಆಗುವುದು ಅಸಾಧ್ಯವೇ ಸರಿ. ಆದ್ದರಿಂದ ಇಲ್ಲಿ ಮಹಿಳಾ ಬರಹಗಾರರನ್ನು ಈಗಲೂ ಕಾಡುತ್ತಿರುವ 'ನೈತಿಕತೆ' ಹೆಸರಿನ ಮಾನಸಿಕ ನಿರ್ಬಂಧಗಳನ್ನು, ಇವರು ಅನುಭವಿಸುವ ಸೆನ್ಸಾರ್‌ಷಿಪ್‌ಗಳನ್ನು ಎಂದೂ ತಮಗೆ ವಿಧಿಸಿಕೊಂಡಿರದ ಬೇರೊಂದು ಜಾಗದಿಂದಲೇ ನೋಡಬಲ್ಲ ಗೌರಿಗೆ ತಮ್ಮ ಭಾಷೆಯಲ್ಲಿ ಮಹಿಳಾ ಬರಹದ ಪರಂಪರೆಯ ಬಗ್ಗೆ ಎಷ್ಟು ಗೌರವ, ಹೆಮ್ಮೆಗಳಿವೆ ಎಂಬುದನ್ನೂ ನಾವು ಮನಸಿಟ್ಟು ವಿಚಾರಮಾಡಬೇಕಾದ್ದಿದೆ.

ಗೌರಿಯವರ ಬರಹಗಳಲ್ಲಿ ಪುರುಷರ ಚಿತ್ರಣಗಳನ್ನು ಅವರ ಪುರುಷ ಓದುಗರು 'ಸಹಜವಾಗಿದೆ' ಎಂದು ಒಪ್ಪುತ್ತಾರಂತೆ, ಅದೇ ಪುರುಷ ಚಿತ್ರಣವನ್ನು ಅವರ ಬರಹಗಳ ಮಹಿಳಾ ಓದುಗರು 'ತುಂಬ ಒಳ್ಳೆಯ ಗಂಡಸರು. ಹೆಂಗಸರನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವ ದೇವತಾ ಪುರುಷರು' ಎಂದು ಮೆಚ್ಚುತ್ತಾರಂತೆ. ಮಹಿಳೆಯರ ಬದುಕಿನ ಖಾಸಗಿ ಅನುಭವಗಳ ಚಿತ್ರಣದಲ್ಲಿ ಏನೂ ಹುರುಳಿರುವುದಿಲ್ಲ ಎಂಬ ವಿಮರ್ಶಕರ ನಿರ್ಲಕ್ಷ್ಯವೂ ಗೌರಿಯವರಿಗೆ ಗೊತ್ತು. ಈ ವಿಷಯಗಳಲ್ಲಿ ಅವರ ಪ್ರತಿಕ್ರಿಯೆ ಹೀಗಿದೆ :

**"ಗಂಡಸರ ಬರಹಗಳತ್ತ ನೋಡಿ, ಕೌಟುಂಬಿಕ ಲೋಕವೊಂದು ಇಲ್ಲವೇ ಇಲ್ಲವೇನೋ ಎಂಬ ಹಾಗೆ ಅವರು ಬರೆಯುತ್ತಾರೆ. ಆದರೆ ಮೊದಲ ತಲೆಮಾರಿನ ಮರಾಠಿ ಲೇಖಕಿಯರಾದ ಮುಕ್ತಾಬಾಯಿ, ಬಹೆನಾಬಾಯಿ, ಜನಾಬಾಯಿ ಮುಂತಾದವರ ಬರಹಗಳನ್ನು ನೋಡಿ. ಅವರ ಜೀವನ ನೋಟಗಳೆಲ್ಲ ಎಷ್ಟೊಂದು ವಾಸ್ತವವಾಗಿದ್ದವು ಎಂಬುದನ್ನು ಕಾಣುತ್ತೀರಿ. ಅವರಾರೂ ಎಂದೂ ತಮ್ಮ ಆ 'ಒಳಲೋಕ'ಗಳನ್ನು ದಾಟಲು ಯತ್ನಿಸಿದವರೇ ಅಲ್ಲ. ಆದರೂ ಯಾವ ಮಹಿಳಾ ಲೋಕದ ಬಗ್ಗೆ ಅವರು ಬರೆದರೋ ಅದು ಇನ್ನೂ ಒಂದು ಮಿಲಿಯನ್ ವರ್ಷಗಳವರೆಗೂ ಬಾಳಿಕೆ ಬರುವ ಲೋಕವಾಗಿದೆ! ನನ್ನ ಬರಹದ ಪುರುಷ ಪಾತ್ರಗಳ ಚಿತ್ರಣದ ಬಗ್ಗೆ ಮಹಿಳೆಯರು ಹೇಳುವ (ಕೊಂಡಾಟದ) ಮಾತುಗಳನ್ನು ಕೇಳಿದರೆ ನನಗೆ ನಿಜಕ್ಕೂ ದುಃಖವಾಗುತ್ತದೆ. ಒಬ್ಬರನ್ನು 'ಅರ್ಥಮಾಡಿಕೊಳ್ಳುವುದು' ಎಂದರೇನು ಎಂಬ ಬಗ್ಗೆ ನಮ್ಮ ಹೆಣ್ಣುಮಕ್ಕಳ ತಿಳಿವಳಿಕೆಯೇ ಎಷ್ಟೊಂದು ತೆಳುವಾದ್ದು! ಒಬ್ಬಿಬ್ಬರನ್ನು ಹೊರತು ಪಡಿಸಿದರೆ ನನ್ನ ಕತೆಗಳಲ್ಲಿನ ಪುರುಷ ಪಾತ್ರಗಳೆಲ್ಲ ಮಧ್ಯಮವರ್ಗದ ಟಿಪಿಕಲ್ ಭಾರತೀಯರೆ. ಇವರನ್ನು ನಾನು 'ನೇತ್ಯಾತ್ಮಕ' ವೆಂದು ಕರೆಯುತ್ತೇನೆ. ಅವರು ಹೆಂಡತಿಯರನ್ನು ಹೊಡೆದು ಬಡಿದು ಮಾಡುವುದಿಲ್ಲ; ಅವರನ್ನು ಬೆದರಿಸಲಾರರು, ಅವರು ಕುಡಿಯುವುದಿಲ್ಲ... ಇತ್ಯಾದಿ. ಅವರಲ್ಲಿ ಯಾವುದೆಲ್ಲ ಗುಣವೋ ಅವೆಲ್ಲ 'ನೇತ್ಯಾತ್ಮಕ'ವೇ ತಾನೆ. ಇಂಥವರು ಧನಾತ್ಮಕವಾದದ್ದನ್ನು ಏನಾದರೂ ಎಲ್ಲಿ ಮಾಡಿಯಾರು? ಇಂಥ ಪ್ರಶ್ನೆಯನ್ನು ಏಕೆ ಯಾರೂ ಕೇಳುವುದಿಲ್ಲ? ನಮ್ಮ ಹೆಣ್ಣುಮಕ್ಕಳು ತಮ್ಮ ಬದುಕಿನ ಪುರುಷರ ಸಂಬಂಧಗಳಲ್ಲಿ ಎಷ್ಟು ಅಲ್ಪವಾದ ನಿರೀಕ್ಷೆಗಳನ್ನು ಇಟ್ಟುಕೊಂಡಿದ್ದಾರೆಂದು ನನಗೆ ದುಃಖವಾಗುತ್ತದೆ. ಪ್ರೇಮದ ಆಕಾಂಕ್ಷೆ, ಗೌರವದ ನಿರೀಕ್ಷೆ; ಸಂವಹನೆಯ ಹಂಬಲ, ಜಗತ್ತಿನೊಂದಿಗೆ ಸಂವಾದ ನಡೆಸುವ ಸಾಮರ್ಥ್ಯ ಇಂಥ ಅಪೇಕ್ಷೆಗಳೆಲ್ಲ ಮಹಿಳೆಯರಲ್ಲಿ ಎಲ್ಲಿ ಹೋದವು? ತಮ್ಮ ಗಂಡಸರೊಂದಿಗಿನ ಸಂಬಂಧಗಳಲ್ಲಿ ಇಂಥ ಪ್ರಶ್ನೆಗಳೇಕೆ ಇವರಿಗೆ ಮುಖ್ಯವಾಗಿಲ್ಲ?"**

ಗೌರಿಯವರ ವಿಚಾರಗಳು ಆಧುನಿಕತೆ ಎಂದರೇನು? ಪ್ರಗತಿ ಎಂಬುದು ಪಾಶ್ಚಾತ್ಯ ಉದಾರವಾದಿ ಪರಿಕಲ್ಪನೆ ಹೇಳುವ ವ್ಯಕ್ತಿ ಸ್ವಾತಂತ್ರ್ಯ ಮಾತ್ರವೆ? ಮುಂತಾಗಿ ಹಲವಾರು ಪ್ರಶ್ನೆಗಳನ್ನು ಹುಟ್ಟುಹಾಕುತ್ತವೆ.

ಗೌರಿ ದೇಶಪಾಂಡೆಯ ಬರಹಗಳನ್ನು ಓದದ, ಅದನ್ನು ವಿಮರ್ಶೆಮಾಡಲು ಹೊರಟಿಲ್ಲದ ಈ ಲೇಖನ ಆ ಲೇಖಕಿಯ ವಿಚಾರಗಳನ್ನು ಮಾತ್ರ ಹಿಂಬಾಲಿಸಲೆತ್ನಿಸಿದೆ. ಅದು ನಮ್ಮಲ್ಲೂ ಒಳ ವಿಚಾರದಲೆಗಳನ್ನು ಮೀಟಲಿ ಎಂಬುದೇ ಇಲ್ಲಿನ ಆಶಯ.

❑

*ಬಿಟ್ಟುಬಿಡಿ ಅವಳನ್ನು*
*ಬರೆಯಲಿ ಅವಳು ಅವಳ ಚಿತ್ರವನ್ನು*
*ತುಂಬಲಿ ಬೇಕಾದ ಬಣ್ಣವನ್ನು*
– ರಾಜಿ

*ಆಕೆಯಲ್ಲ ನಿಮ್ಮನೆಯ ಗಾಣದೆತ್ತು*
*ಕೊಡಿ ಸ್ವಲ್ಪ ಆಕೆಗೂ ಪುರುಸೊತ್ತು*
*ಏನೇನು ಆಗುವಳೊ ಆಕೆ ಯಾರಿಗೆ ಗೊತ್ತು ?*
– ರಾಜಿ




# 'ಸುಳಿ' ಕಥಾ ಸಂಕಲನ; ಗಮನ ಸೆಳೆದ ವಿಚಾರಗಳು

● ಎಚ್.ಎಸ್.ಆರ್.

ಎಚ್.ಎಸ್. ಪಾರ್ವತಿಯವರ 'ಸುಳಿ' ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ, ವಿವಿಧ ಕಥಾ ವಸ್ತುವನ್ನು ಹೊಂದಿದ ಸಣ್ಣಕತೆಗಳ ಸಂಗ್ರಹ.

'ಸುಳಿ'ಯ ಕಥಾ ವಸ್ತುವಿನಲ್ಲಿ ವೈವಿಧ್ಯವಿದೆ. ಜಾತಿ ಸಮಸ್ಯೆ, ಅರೆಬರೆ ತಿಳಿವಳಿಕೆಯಿಂದ ಉಂಟಾಗುವ ಅನಾಹುತ, ಕಳೆದುಹೋದ ಮಗುವಿನ ಹುಡುಕಾಟದಲ್ಲಿರುವ ದ್ವಂದ್ವ, ವರ್ಗ ಸಮಸ್ಯೆ ಉಗ್ರರ ಸಮಸ್ಯೆ, ದುಷ್ಟ ಗಂಡಿನ ಸುಳಿಯಲ್ಲಿ ಸಿಕ್ಕು ನಲುಗುವ ಹೆಣ್ಣು, ಅಜ್ಜಿ–ಮೊಮ್ಮಗುವಿನ ಸಂಬಂಧ ಮುಂತಾದ ಸಮಸ್ಯೆಗಳ ಸುತ್ತ ಕತೆಗಳನ್ನು ಹೆಣೆಯಲಾಗಿದೆ.

ವಸ್ತು ಸಂಕೀರ್ಣವಾಗಿದ್ದರೂ, ಈ ಸಂಕೀರ್ಣತೆ ಗುಂಗಾಗಿ ಕಾಡುವಲ್ಲಿ ಸೋಲುತ್ತದೆ ಎಂಬ ಸಣ್ಣ ಅಸಂತೃಪ್ತಿಯನ್ನು ಬದಿಗಿಟ್ಟು ನೋಡಿದರೆ 2002ರಲ್ಲಿ ಪ್ರಕಟವಾದ ಈ ಕಥಾಸಂಕಲನದಲ್ಲಿ ಮಹಿಳಾ ಸಮಸ್ಯೆಗಳ ಸುತ್ತ ಕೇಂದ್ರೀಕರಿಸಿದ ಕತೆಗಳು ಗಮನ ಸೆಳೆಯುತ್ತವೆ. ಕಥಾವಸ್ತುವಿನ ನಿರ್ವಹಣೆ ಹಾಗೂ ಕಥಾ ನಾಯಕಿಯರು ತೆಗೆದು ಕೊಳ್ಳುವ ಅಸಾಂಪ್ರದಾಯಿಕ ನಿರ್ಣಯಗಳು ಗಮನಾರ್ಹವಾಗಿವೆ.

'ಅರ್ಧಜ್ಞಾನ' ಕತೆಯ ಕಲ್ಯಾಣಿ ಸ್ವಾಭಿಮಾನ, ಸ್ವತಂತ್ರ ಮನೋಭಾವನೆಯ ಹೆಣ್ಣು. ಆಕೆ ಸಾಹಿತ್ಯ, ಸಂಗೀತದಲ್ಲಿ ಆಸಕ್ತಿಯಿರುವ ನಾಗರಾಜನನ್ನು ಮದುವೆಯಾಗುತ್ತಾಳೆ. ಮದುವೆಯಾದ ಮೊದಲನೆಯ ರಾತ್ರಿಯೇ ಅವನಿಗೆ ಆಕೆಯ ಶೀಲದ ಬಗ್ಗೆ ಅನುಮಾನ ಬರುತ್ತದೆ. ಕಾರಣ ಆತನ ಅರೆಬರೆ ತಿಳಿವಳಿಕೆ. ಮೊದಲನೆಯ ರಾತ್ರಿ ಹೆಣ್ಣಿನ ಕನ್ಯತ್ವದ ಪೊರೆ ಹರಿಯುವುದು, ರಕ್ತದ ಕಲೆ ಇದರ ಬಗ್ಗೆ ಸರಿಯಾದ ಮಾಹಿತಿ ಇಲ್ಲದೆ ಹೆಂಡತಿಯ ಶೀಲವನ್ನು ಅನುಮಾನಿಸಿ ಆಕೆಗೆ ವಿಚ್ಛೇದನ ನೀಡಲು ಮುಂದಾಗುತ್ತಾನೆ. ಆಕೆಯ ನಡತೆ ಸರಿಯಿಲ್ಲವೆಂದು ಆರೋಪಿಸುತ್ತಾನೆ. ಅನಂತರ ತನ್ನದು ತಪ್ಪು ತಿಳಿವಳಿಕೆಯೆಂದು ಅರಿವಾಗಿ ಹೆಂಡತಿಯ ಕ್ಷಮೆಯಾಚಿಸಿ ಆಕೆಯನ್ನು ವಾಪಸ್ಸು ಕರೆತರಲು ಬಯಸುತ್ತಾನೆ. ಆದರೆ ಕಲ್ಯಾಣಿ ಸಾಮಾನ್ಯ ಹೆಂಗಸರಿಗಿಂತ ಇಲ್ಲಿ ಬೇರೆಯಾಗುತ್ತಾಳೆ. ಆಕೆ ಸ್ವಾಭಿಮಾನದ ನಿರ್ಧಾರವನ್ನು ತೆಗೆದುಕೊಳ್ಳುತ್ತಾಳೆ. ಅವನ ಆಹ್ವಾನವನ್ನು ತಿರಸ್ಕರಿಸುತ್ತಾಳೆ "ಅವನು ಬೇಕು ಅಂದಾಗ ಬರಲು, ಬೇಡ ಎನ್ನುವಾಗ ವಾಪಸ್ಸು ಹೋಗಲು ನಾನೇನು ಆಟದ ಬೊಂಬೆಯೇ? ನಾಳೆ ಆತ ಪುನಃ ಅನುಮಾನದಿಂದ ನೋಡುವುದಿಲ್ಲ ಎನ್ನುವುದಕ್ಕೆ ಖಾತರಿ ಏನು" ಎಂದು ಪ್ರಶ್ನಿಸುತ್ತಾಳೆ. ಸಮಾಜ 'ಗಂಡಬಿಟ್ಟವಳು' ಎನ್ನುತ್ತೆ, ಒಂಟಿ ಜೀವನ ಮಾಡಬೇಕು ಎಂಬ ಪ್ರಶ್ನೆ ಎದುರಾದಾಗ ನಾನೇಕೆ ಒಂಟಿ? ತಂದೆ–ತಾಯಿ ಇದ್ದಾರೆ, ಕೆಲಸ ಇದೆ, ಅದಕ್ಕೂ ಮಿಕ್ಕಿ ನನ್ನ ಸಂಗೀತವಿದೆ ಎಂದು ಆತ್ಮವಿಶ್ವಾಸದಿಂದ ಹೇಳುತ್ತಾ ಸಂಪ್ರದಾಯದ ಬದುಕಿಗೆ ವಿದಾಯ ಹೇಳುತ್ತಾಳೆ.

'ಕರುಳ ಸಂಬಂಧ' ಕತೆಯಲ್ಲಿ ಬೇರ್ಪಟ್ಟ ತಾಯಿ ಮಗಳ ಸಂಬಂಧದಲ್ಲಿ ಮಗಳು ತೆಗೆದುಕೊಳ್ಳುವ ತೀರ್ಮಾನ ನಿರ್ಣಾಯಕವಾಗಿದೆ.

ರಜಿನಿ ತಾಯಿಯಿಂದ ಬೇರ್ಪಟ್ಟ ಕಲಾವಿದೆ. ಆಕೆಯ ಅಜ್ಜಿ ಮನೆ ಕೆಲಸದ ಹೆಂಗಸು. ಆಗಾಗ ತನ್ನ ಮಗಳು ಶಾರದೆಯನ್ನು ಮನೆಗೆ ಕರೆದುಕೊಂಡು ಬರುತ್ತಿದ್ದಳು. ಆಕೆಯ ರೂಪವನ್ನು ಮೆಚ್ಚಿದ ಆ ಮನೆಯ ತರುಣ ಪ್ರಸಾದ ಎಲ್ಲರನ್ನೂ ವಿರೋಧಿಸಿ ಅವಳನ್ನು ಮದುವೆಯಾಗುತ್ತಾನೆ. ಆದರೆ, ಕ್ರಮೇಣ ಅವರಿಬ್ಬರ ಮಧ್ಯೆ ಅಂತಸ್ತಿನ ಪ್ರಶ್ನೆ ಬಂದು ಆಕೆಯನ್ನು ಹಿಂಸಿಸತೊಡಗುತ್ತಾನೆ. ಇದೇ ಸಂದರ್ಭದಲ್ಲಿ ಪ್ರಸಾದನ ಸ್ನೇಹಿತ ಸನ್ನಿವೇಶದ ಲಾಭ ಪಡೆದು ಶಾರದೆಗೆ ಹತ್ತಿರವಾಗುತ್ತಾನೆ. ಇದು ಪ್ರಸಾದನ ಕ್ರೌರ್ಯವನ್ನು ಹೆಚ್ಚಿಸುವುದಲ್ಲದೆ, ಆಕೆಯನ್ನು ಮನೆಯಿಂದ ಹೊರಹಾಕುತ್ತಾನೆ. ಮಗುವನ್ನು ತಾಯಿಯ ನೆರಳು ಬೀಳದಂತೆ ಸಾಕುತ್ತಾನೆ. ನೃತ್ಯ ಪ್ರದರ್ಶನವೊಂದರಲ್ಲಿ ಅಪರಿಚಿತ ಹೆಂಗಸೊಬ್ಬಳನ್ನು ಗಮನಿಸಿ, ಅನಂತರ ಆಕೆಯೇ ತನ್ನ ತಾಯಿಯೆಂದು ತಿಳಿದ ಮೇಲೆ ಆಕೆಯನ್ನು ಒಪ್ಪಿಕೊಳ್ಳುತ್ತಾಳೆ. ತಂದೆ, ಅಜ್ಜಿ, ಎಲ್ಲರನ್ನು ಎದುರು ಹಾಕಿಕೊಂಡರೂ, ತಾಯಿಯನ್ನು ಆಗಾಗ ಭೇಟಿ ಮಾಡಿ ಕಷ್ಟ ಸುಖ ಹಂಚಿಕೊಳ್ಳುತ್ತಾಳೆ. ಧೈರ್ಯ, ಭರವಸೆ ನೀಡುತ್ತಾಳೆ.

'ಕೈಕೇಯಿ ಸ್ವಗತ' ಕಡೆಯು ಕೈಕೇಯಿ ರಾಮನನ್ನು ಕಳಿಸುವಾಗ ಭರತನಿಗೆ ರಾಜನ ಪಟ್ಟ ಕೊಡಿಸುವಲ್ಲಿ ಮಂಥರೆ ಅವಳ ಮನಸ್ಸಿನ ಮೇಲೆ ಬೀರುವ ಪ್ರಭಾವ, ವಯಸ್ಸಾದ ದಶರಥನನ್ನು ಮದುವೆಯಾದ ಅಸಹನೆ ಹಾಗೂ ತಾನು ರಾಮನನ್ನು ಕಾಡಿಗೆ ಕಳಿಸಿ ಹೊತ್ತ ಅಪರಾಧದ ಭಾರವನ್ನು ಚಿತ್ರಿಸುತ್ತದೆ.

> 'ನೀವೂ ಓದಿ' ಹೊಸ ಅಂಕಣ. ನೀವೂ ಭಾಗವಹಿಸಿ. ಅಭಿಪ್ರಾಯ ಹಂಚಿಕೊಳ್ಳಿ. ನೀವು ಓದಿದ ಹಳೆಯ ಅಥವಾ ಹೊಸ ಪುಸ್ತಕದಲ್ಲಿ ಸ್ತ್ರೀಪರ ಚಿಂತನೆಗಳು ಮಂಡಿತವಾಗಿರುವ ಬಗೆಯನ್ನು ಕುರಿತು ಪ್ರತಿಕ್ರಿಯಿಸಿರಿ. ನಿಮ್ಮ ವಿಚಾರ ವಿಶ್ಲೇಷಣೆಗಳನ್ನು ಎರಡು ಅಥವಾ ಮೂರು ಪುಟಗಳಲ್ಲಿ ಬರೆದು ಕಳಿಸಿರಿ. ನೀವು ಓದಿದ ಪುಸ್ತಕದ ಲೇಖಕರು, ಪ್ರಕಾಶನ, ಪ್ರಕಟವಾದ ವರ್ಷ ಇತ್ಯಾದಿ ವಿವರಗಳನ್ನು ಕಳಿಸಿಕೊಡಿ

'ಆದದ್ದೆಲ್ಲ ಒಳಿತೇ ಆಯಿತು' ಪುರಂದರ ದಾಸರ ಕತೆಯನ್ನೇ ಪುನಃ ಕಟ್ಟಿಕೊಡುತ್ತದೆ. ಜಿಪುಣ ಶ್ರೀನಿವಾಸನ ಹೆಂಡತಿ ಸರಸ್ವತಿಯ ಪಾತ್ರವನ್ನು ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿ ನೋಡಲಾಗಿದೆ. ಎಷ್ಟು ಶ್ರೀಮಂತಿಕೆಯಿದ್ದರೂ ಹೆಂಡತಿ ಸ್ವಂತ ನಿರ್ಧಾರದಿಂದ ದಾನ ನೀಡುವ ಸ್ವತಂತ್ರ, ಹಕ್ಕನ್ನು ಹೊಂದಿರುವುದಿಲ್ಲ. ಆಕೆ ಕೊರಗಿ, ಕೊರಗಿ ಕೊನೆಯಲ್ಲಿ ಅವಮಾನ, ಹಿಂಸೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಗಂಡ ಮನೆಬಿಟ್ಟು ಹೋಗು ಎಂದಾಗ ಆಕೆ ತನಗೆ ತಾನೇ ಕೇಳಿಕೊಳ್ಳುವ ಪ್ರಶ್ನೆ ಇಂದಿನ ಹೆಣ್ಣುಮಕ್ಕಳ ಸ್ಥಿತಿಗತಿಯನ್ನು ವಿವರಿಸುತ್ತದೆ.

'ಈ ಮನೆ ನನ್ನದಲ್ಲವೆ? ಹಾಗಾದರೆ ತಾನೆಂದು ಕೊಂಡಿದ್ದು ಬರೀ ಭ್ರಮೆಯೆ? ಹೆಣ್ಣಿಗೆ ಅವಳದೇ ಆದ ಮನೆ ಎಲ್ಲಿರುತ್ತದೆ?

ಮದುವೆಯಾಗುವವರೆಗೆ ತಂದೆಯ ಮನೆ, ಗಂಡ ಆದರದಿಂದ ಕಾಣುವವರೆಗೆ ಗಂಡನಮನೆ, ಬೇಸರವಾದರೆ ಅಥವಾ ಯಾವಾಗ ಬೇಕಾದರೂ ಅವಳನ್ನು ಹೊರಗಟ್ಟಬಹುದು. ಮನೆ, ಸಂಪತ್ತು, ಮಕ್ಕಳು ಆಹಾ! ಹೊರನೋಟಕ್ಕೆ ಎಂಥ ಸುಂದರಸಂಸಾರ ! ಆದರೆ ಒಳಗೆ ಬರೀ ಟೊಳ್ಳು. ಎಷ್ಟು ವರ್ಷ ಬದುಕಿದ್ದರೂ ಇಷ್ಟೇ ಗುಲಾಮಳಂತೆ ಬಾಳುವುದೇ ಜೀವನ?' ಸರಸ್ವತಿಯ ಪ್ರಶ್ನೆ ಇಂದಿನ ಹೆಣ್ಣುಮಕ್ಕಳ ಪ್ರಶ್ನೆಗಳೂ ಆಗಿವೆ.

'ಗಂಡಾಗಿ ಕಾಡಿತ್ತು ಮಾಯೆ'ಯಲ್ಲಿ ಸಂಸಾರದ ಭಾರ ಹೊತ್ತ ಕಾಮಾಕ್ಷಿ ಮದುವೆಯಾಗದೇ ಉಳಿಯುತ್ತಾಳೆ. ತನ್ನ 40ನೇ ವಯಸ್ಸಿನಲ್ಲಿ ಕಪಟಮನುಷ್ಯ ರಮಾಕಾಂತನ ಆಕರ್ಷಣೆಗೆ ಒಳಗಾಗಿ, ಗಾಢವಾಗಿ ಪ್ರೀತಿಸಿ ದುರಂತದೆಡೆಗೆ ಹೆಜ್ಜೆ ಹಾಕುತ್ತಾಳೆ. ಅವನಿಗಾಗಿ ಸಾಕಷ್ಟು ಹಣವನ್ನು ಖರ್ಚುಮಾಡುತ್ತಾಳೆ. ಆಕೆಯಿಂದ ಪಡೆಯುವುದನ್ನೆಲ್ಲಾ ಪಡೆದು ಅನಂತರ ಆತ ಆಕೆಯನ್ನು ಅವಮಾನಿಸುತ್ತಾನೆ. ಒಂದು ಸಂದರ್ಭದಲ್ಲಿ ಆಕೆಯನ್ನು ಕುರಿತು 'ಆಕೆಗೆ ಮನೋಪಾಸ್ ಸ್ಟೇಜ್, ಆಕೆಯ ಮನಸ್ಸು ಆಯ ತಪ್ಪಿದೆ. ಮದುವೆ ಬೇರೆ ಆಗಿಲ್ಲ' ಎಂಬ ಮಾತುಗಳನ್ನು ಕಾಮಾಕ್ಷಿ ಕೇಳಿಸಿಕೊಂಡು ರೌದ್ರಾವಾತಾರ ತಾಳಿ ಬೈಯುತ್ತಾಳೆ. ಆತ ತಳ್ಳಿದ ರಭಸಕ್ಕೆ ಅವಳ ತಲೆಗೆ ಏಟುತಗುಲಿತು. ಆತ ಆಕೆಯನ್ನು ಆಸ್ಪತ್ರೆಗೆ ಸೇರಿಸಿ ಕೈತೊಳೆದುಕೊಳ್ಳುತ್ತಾನೆ. ಆತನ ಕಪಟತನದ ಬಗ್ಗೆ ಬೇರೆಯವರು ಹೇಳಿದ್ದರೂ ಕಾಮಾಕ್ಷಿಗೆ ಆತನ ಮೇಲಿನ ಮೋಹ ಹೋಗಿರಲಿಲ್ಲ. ಆಕೆ ಅವನನ್ನು ಸಂಪೂರ್ಣವಾಗಿ ನಂಬಿರುತ್ತಾಳೆ. ಆಕೆಯ ನಂಬಿಕೆಯ ಕಟ್ಟಡ ದಿಢೀರನೆ ಕುಸಿದು ಬೀಳುತ್ತದೆ. ಆದರೆ ಆಕೆ ಪುನಃ ಚೇತರಿಸಿಕೊಳ್ಳುತ್ತಾಳೆ. ಅಧ್ಯಯನದಲ್ಲಿ ಮುಳುಗುತ್ತಾಳೆ, ಕಾಲ ಗಾಯವನ್ನು ವಾಯಿಸುತ್ತದೆ.

ಈ ಎಲ್ಲಾ ಕತೆಗಳಲ್ಲೂ ಒಂದು ಸೂತ್ರ ಬದ್ಧ ನಿಲುವು, ನಿರ್ಧಾರ ವಿದೆ. ಜ್ವಲಂತಸಮಸ್ಯೆಗಳನ್ನು ಕೇಂದ್ರೀಕರಿ ಸಿರುವುದರಿಂದ ಪ್ರಸ್ತುತತೆಯನ್ನು ಪಡೆಯುತ್ತವೆ. ಪುರುಷ ಪ್ರಧಾನ ಸಮಾಜದಲ್ಲಿ ತನ್ನ ಸ್ವಂತಿಕೆ, ಸ್ವಾಭಿಮಾನದ ನಿರ್ಧಾರದಿಂದಾಗಿ ಇಲ್ಲಿಯ ಸ್ತ್ರೀಯರು ಭಿನ್ನರಾಗುತ್ತಾರೆ. ನಿರ್ಧಾರ ತೆಗೆದುಕೊಳ್ಳಲು ಸಾಧ್ಯವೇ ಇಲ್ಲವೆನ್ನುವಂಥ ಉಸಿರುಗಟ್ಟಿಸುವ ವಾತಾವರಣದ ವಿರುದ್ಧ ಈಜುವ ಧೈರ್ಯ ಮಾಡುವ ಪಾತ್ರಗಳಿವೆ. ಈ ಹಿನ್ನಲೆಯಲ್ಲಿ ಲೇಖಕಿ ಗಮನಾರ್ಹವಾಗುತ್ತಾರೆ. ಆದರೆ ಇಷ್ಟು ಗಂಭೀರವೂ ಅರ್ಥಪೂರ್ಣವೂ ಆದ ಬದುಕು, ಎತ್ತರಗಳನ್ನು ಚಿತ್ರಿಸುವಾಗ ಕತೆಕಟ್ಟುವ ಕಲೆ ಇನ್ನೇನನ್ನೋ ಬೇಡುತ್ತದೆಯಲ್ಲವೆ ? ಸಂಭಾಷಣೆಯೇ ಕಥಾ ರಚನೆಯ ಸ್ವರೂಪವೆನ್ನುತ್ತೀರಾ ? ನೀವೂ ಓದಿ, ಯೋಚಿಸಿ. ❑

**ನಿತ್ಯ ನೋಟ**

## ವೇಲಾಯುಧ ತಿರುಗಿಸಿ ನೆಟ್ಟು ಬಿಡ್ತೀನಿ !

ಆ ದಂಪತಿಗಳು ತಮಿಳುನಾಡಿನಿಂದ ಬಂದ ಕೂಲಿಗಳು. ಕೊಂಚ ಹೆಚ್ಚು ಎನ್ನಿಸುವಷ್ಟು ವಯಸ್ಸಿನ ಗಂಡ, ಮಧ್ಯವಯಸ್ಸಿನ ಅವನ ಹೆಂಡತಿ. ಕಟ್ಟಡಗಳ ಕಾಮಗಾರಿಗಾಗಿ ಧರ್ಮಪುರಿಯಿಂದ ಬಂದರಂತೆ. ಮುದುಕನಿಗೆ ಕಷ್ಟದ ಕೆಲಸ ಕೈಸಾಗುವುದಿಲ್ಲ. ಅವನು ವಾಚ್‌ಮನ್ ಕೆಲಸಕ್ಕೆ ನಿಂತರೆ, ಆಕೆ ಗಾರೆ ಕೆಲಸಕ್ಕೆ ನಿಂತಳು.

ಅದೊಂದು ದಿನ... ಮೇಸ್ತ್ರಿಗೇನೊ ಮೂಡು ಕೆಟ್ಟಿತ್ತು. ಅವನು ಬಂದಾಗ ಆಕೆ ಗಂಡನಿಗೆ ಗಂಜಿ ಕಾಯಿಸುತ್ತಿದ್ದಳು. ಕೆಲಸ ಮಾಡದೆ ಕೂತಿದೀಯಾ ಅಂತ ಗದರಿದ. ಮಾತಿಗೆ ಮಾತು ಬೆಳೆದು, ವಾಗ್ಯುದ್ಧ ತಾರಕಕ್ಕೇರಿತು. ಅಂತಿಮವಾಗಿ ಗಂಡನಿಗೆ ಕೆಲಸ ಉಂಟು; ಹೆಂಡತಿಗೆ ಇಲ್ಲ ಅಂದುಬಿಟ್ಟ ಮೇಸ್ತ್ರಿ. ವಾಚ್‌ಮನ್ ಕೆಲಸಕ್ಕೆ ಬರುವ ಹಣದಿಂದ ಇಬ್ಬರ ಹೊಟ್ಟೆ ತುಂಬುವುದಿಲ್ಲ. ಅವಳಾದರೆ ಇನ್ನೂ ಗಟ್ಟಿಗಿದ್ದಾಳೆ, ಜಾಸ್ತಿ ಸಂಪಾದಿಸಬಹುದು. ಈಗ ಮತ್ತೆ ಸೆರಗುಕಟ್ಟಿ ಜಗಳಕ್ಕೆ ನಿಂತಳು. ಅವಳದೇನೂ ಸಣ್ಣದನಿಯಲ್ಲ. ಮಾತುಗಳೂ ಕೊಂಚ ಒರಟು... ಅಸಭ್ಯ ಅನ್ನಿಸುವಂಥವು. ಮೇಸ್ತ್ರಿನೂ ಒರಟನೇ...

ಕಡೆಗೆ ದಂಪತಿಗಳು ಹೊರಟು ನಿಂತರು. ಆಕೆ ಇದ್ದ ಹರಕು ಮುರುಕು ಅಲ್ಯುಮಿನಿಯಂ ಪಾತ್ರೆ, ಹರಿದ ಹೊದಿಕೆ, ಬಟ್ಟೆ ಜೋಡಿಸಿಟ್ಟುಕೊಂಡಳು. "ಎರಡು ವಾರದ ಸಂಬಳ ಬಂದಿಲ್ಲ" ಕೊಟ್ಟುಬಿಡು ಹೋಗ್ತೀವಿ, ಅಂತ ಮೇಸ್ತ್ರಿಗೆ ಕೇಳಿದಳು. ಅವನು ಮತ್ತಷ್ಟು ಒರಟಾಗಿ ವರ್ತಿಸಿದ, ಕೆಟ್ಟ ಮಾತಾಡಿದ. ಅವಳಿಗೂ ರೇಗಿತು ತಮಿಳಿನಲ್ಲಿ ಬೈದಾಡಿದಳು. ಅವಳ ಬೈಗುಳದಲ್ಲಿ ಒಂದು ಮಾತು ಮೇಸ್ತ್ರಿಯ ಹೆಂಡತಿಯನ್ನು ಕುರಿತೂ ಇತ್ತೆಂದು ತೋರುತ್ತದೆ.

ಮೇಸ್ತ್ರಿಗೆ ಸಿಟ್ಟು ನೆತ್ತಿಗೇರಿತು. ಅವಳನ್ನು ಹಿಡಿದು ಬಾರಿಸ ತೊಡಗಿದ.

ಉರುಳಾಡಿಸಿಕೊಂಡು ಕಾಲಿನಲ್ಲಿ ಒದ್ದ. ಅವಳ ಕತ್ತು ಹಿಡಿದು ಅಮುಕ ತೊಡಗಿದ. ಆಕೆ ತೇಲುಗಣ್ಣು ಮೇಲುಗಣ್ಣು ಬಿಡುತ್ತ ಕೆಳಗೆ ಬಿದ್ದಳು; ಸ್ಮೃತಿ ತಪ್ಪಿದಳು. ಅವಳ ಮುದಿಗಂಡ ಅವಳನ್ನೇ ಬೈಯತೊಡಗಿದ.

ಮೇಸ್ತ್ರಿ 'ಅವಳು ನಾಟಕ ಮಾಡ್ತಿದ್ದಾಳೆ, ಅವಳಿಗೇನೂ ಆಗಿಲ್ಲ' ಅಂತ ಇನ್ನಷ್ಟು ಬೈದಾಡಿ ಹೋದ.

ಬಹಳ ಸಮಯದ ನಂತರ ಅವಳು ಸುಧಾರಿಸಿಕೊಂಡು ಎದ್ದಳು. ಮೇಸ್ತ್ರಿಗೆ ಶಾಪಹಾಕುತ್ತಾ ಗಂಟು ಮೂಟೆ ಎತ್ತಿಕೊಂಡು. ನಡೆಯಲಾಗದ ಮುದುಕ ಗಂಡನನ್ನು ಎಳೆದುಕೊಂಡು ನಡೆದಳು.

ಕೊನೆಯದಾಗಿ, "ನಾನು ಸುಮ್ಮನೆ ಬಿಡಲ್ಲ. ಊರಿಗೆ ಹೋಗ್ತೀನಿ ನಮ್ಮ ವೇಲಾಯುಧನ ಗುಡಿಗೆ ಹೋಗಿ ಪೂಜೆ ಮಾಡ್ತೀನಿ. ಒಂದು ವೇಲ್ ತಗೊಂಡು, ಅದನ್ನು **ತಿರುಗಿಸಿ** ನೆಟ್ಟು ಬಿಡ್ತೀನಿ. ಆಗ ಇವನು ನಾಶವಾಗಿ ಹೋಗ್ತಾನೆ, ನೋಡ್ತಿರಿ' ಎಂದು ಕೂಗಿದಳು.

ಅವಳ ಆ ಓಟ, ಮಾತಿನ ಹಿಂದೆ ಏನೊ ಛಲ ಸಾಧಿಸಿದ ಭಾವವಿತ್ತು! ಬಡವರ ಸಿಟ್ಟು ಅದಕ್ಕಿಂತ ಮುಂದೆ ಹೋದದ್ದುಂಟಾ? ಅವಳ ಸಂಕಟಕ್ಕೆ ಅವಳು ನಂಬಿದ ವೇಲಾಯುಧನೇ ಸಾಂತ್ವನ ನೀಡಬೇಕು!

ಪ್ರತಿನಿತ್ಯ ನಮ್ಮ ಕಣ್ಣಮುಂದೆಯೇ ಅನೇಕ ಘಟನೆಗಳು ಸಂಭವಿಸುತ್ತವೆ. ನೋಡಿಯೂ ಸುಮ್ಮನಾಗುವ ಅನಿವಾರ್ಯ. ಆದರೆ ಅಂಥ ಸನ್ನಿವೇಶ ಮನಸ್ಸಿನಲ್ಲಿ ಕಾಡುತ್ತಲೇ ಇರುತ್ತದೆ. ಇಂಥ ಪ್ರಸಂಗ ನಿಮಗೂ ಗೋಚರವಾದಾಗ ಗುರುತು ಹಾಕಿ 'ನಿತ್ಯನೋಟ' ಅಂಕಣಕ್ಕೆ ಕಳಿಸಿ. ಸಂ.

# ಲಿಂಗತ್ವ (ಜೆಂಡರ್) ಎಂದರೇನು?

ಇಂಗ್ಲಿಷ್ ಮೂಲ :
ಅಂಡರ್‌ಸ್ಟ್ಯಾಂಡಿಂಗ್ ಜೆಂಡರ್

ಲೇಖಕರು : ಕಮಲಾ ಭಾಸಿನ್
ಕನ್ನಡಕ್ಕೆ : ವೆಂ. ವನಜ

*(ಹಿಂದಿನ ಸಂಚಿಕೆಯಿಂದ)*

**ಬಾ**ಲಕಿಯರು ಮತ್ತು ಮಹಿಳೆಯರು ಜೈವಿಕವಾಗಿ ದುರ್ಬಲರಾಗಿರುವ ಕಾರಣದಿಂದಾಗಿಯೇ ಈ ವ್ಯತ್ಯಾಸಗಳು ಹುಟ್ಟಿಕೊಂಡಿರಲು ಸಾಧ್ಯವಾಗಿರಬಹುದೆ?

ಜೈವಿಕವಾಗಿ ಹೇಳುವುದಾದರೆ, ವಾಸ್ತವದಲ್ಲಿ ಪುರುಷರು ದುರ್ಬಲವಾದ ಲಿಂಗ. ಅಲ್ಲದೆ Y ವರ್ಣತಂತು (Chromosome) (ಪುರುಷರಲ್ಲಿ ಮಾತ್ರ ಕಂಡುಬರುತ್ತದೆ)ವು ಅನೇಕ ತೊಂದರೆಗಳಿಗೆ ಕಾರಣವಾಗಿದೆ.

ಆ್ಯಶ್ಲೆ ಮಾಂಟೆಗು ಎಂಬ ಚಿಂತಕರು 'ದಿ ನ್ಯಾಚುರಲ್ ಸುಪೀರಿಯಾರಿಟಿ ಆಫ್ ವಿಮೆನ್' ಎಂಬ ತಮ್ಮ ಪುಸ್ತಕದಲ್ಲಿ ಕೊಟ್ಟಿರುವ ಪಟ್ಟಿಯೊಂದರಲ್ಲಿ, ಹೆಚ್ಚಾಗಿ ಅಥವಾ ಸಂಪೂರ್ಣವಾಗಿ ಲಿಂಗಸಂಬಂಧೀ ವರ್ಣತಂತು ಗಳಿಂದಾಗಿ ಬರುವ 62 ನಿರ್ದಿಷ್ಟ ರೋಗಗಳಿವೆ; ಅವು ಹೆಚ್ಚಾಗಿ ಪುರುಷರಲ್ಲಿ ಕಂಡುಬರುತ್ತವೆ. "ಅವುಗಳಲ್ಲಿ ಅರ್ಧದಷ್ಟು ಗಂಭೀರವಾದವುಗಳಾಗಿದ್ದು ಹಿಮೊಫೀಲಿಯ (ರಕ್ತ ಹೆಪ್ಪುಗಟ್ಟುವಿಕೆಯ ತೊಂದರೆ), ಮೈಟ್ರಲ್ ಸ್ಟೆನೊಸಿಸ್ (ಹೃದಯದ ತೊಂದರೆ) ಮತ್ತು ಮಾನಸಿಕ ತೊಂದರೆಯ ಕೆಲವು ವಿಧಗಳು ಸೇರಿಕೊಂಡಿವೆ.... ಜೈವಿಕ ಹೆಣ್ಣುಗಳಿಗಿಂತ ಹೆಚ್ಚು ಸಂಖ್ಯೆಯ ಜೈವಿಕ ಗಂಡುಗಳು ಗರ್ಭಧಾರಣೆಯಿಂದ ಮೊದಲ್ಗೊಂಡು ಬದುಕಿನ ಪ್ರತಿಯೊಂದು ಹಂತದಲ್ಲೂ ಮರಣಹೊಂದುತ್ತಾರೆ. ಹೆಣ್ಣುಮಕ್ಕಳಿಗಿಂತ ಹೆಚ್ಚು ಗಂಡುಮಕ್ಕಳು ಹುಟ್ಟುತ್ತಾರೆ. ಹೆಚ್ಚು ಸಂಖ್ಯೆಯ ಮರಣ ಮತ್ತು ಹೆಚ್ಚು ಸಂಖ್ಯೆಯ ಜನನಗಳು ಜೊತೆ ಜೊತೆಯಾಗಿಯೇ ಇರುವ ಅಂಶಗಳು ಕಂಡುಬರುತ್ತವೆ."

> "X ಮತ್ತು Y ವೀರ್ಯಾಣುಗಳು ಸಮಸಂಖ್ಯೆಗಳಲ್ಲಿ ಉತ್ಪತ್ತಿಯಾದಂತೆ ಕಂಡಬಂದರೂ, ಪ್ರತಿ 100 ಹೆಣ್ಣುಗಳಿಗೆ 120 ರಿಂದ 150 ಗಂಡುಗಳ ಗರ್ಭಧಾರಣೆಯಾಗಿರುತ್ತದೆ. ಜನನಕಾಲದವರೆಗೆ ಹೆಣ್ಣುಮಕ್ಕಳಿಗೆ ಗಂಡುಮಕ್ಕಳ ಪ್ರಮಾಣ ಅಮೆರಿಕದಲ್ಲಿ (ಬಿಳಿಯರಲ್ಲಿ ಮಾತ್ರ) 106:100 ಆಗಿದ್ದರೆ ಬ್ರಿಟನ್ನಿನಲ್ಲಿ ಸುಮಾರು 98:100 ಆಗಿರುತ್ತದೆ. ಹೆಣ್ಣು ಭ್ರೂಣಕ್ಕಿಂತ ಗಂಡು ಭ್ರೂಣಗಳು ಗರ್ಭಪಾತಕ್ಕೊಳಗಾಗುತ್ತವೆ ಅಥವಾ ಸತ್ತು ಹುಟ್ಟುತ್ತವೆ. ಹೆಣ್ಣುಮಕ್ಕಳಿಗಿಂತ ಗಂಡುಮಕ್ಕಳು ಜನನ ಕಾಲದಲ್ಲಾಗುವ ಗಾಯಗಳಿಂದಾಗಿ ಸಾಯುತ್ತವೆ. ಹೆಣ್ಣುಮಕ್ಕಳಿಗಿಂತ ಶೇಕಡ 54ರಷ್ಟು ಗಂಡುಮಕ್ಕಳು ಜನನಕಾಲದಲ್ಲಾಗುವ ಹಾನಿಗಳಿಂದಾಗಿ ಮರಣವನ್ನಪ್ಪಿದರೆ, ಶೇಕಡ 18ರಷ್ಟು ಗಂಡು ಮಕ್ಕಳು ಹುಟ್ಟಿನಿಂದಲೇ ಬರುವ ವೈರೂಪ್ಯಗಳಿಂದ ಮರಣಿಸುತ್ತವೆ.

"ವಾಸ್ತವದಲ್ಲಿ ಹೆಣ್ಣಿನ ಜನನಕಾಲದಲ್ಲಿನ ಜೀವಿತಾವಧಿಯ ನಿರೀಕ್ಷೆ ಎಲ್ಲೆಡೆಯೂ ಗಂಡಿನದಕ್ಕಿಂತ ಹೆಚ್ಚಿರುತ್ತದೆ. ಬ್ರಿಟನ್ನಿನಲ್ಲಿ ಹೆಣ್ಣುಮಕ್ಕಳಿಗೆ ಜನನಕಾಲದ ಜೀವಿತಾವಧಿಯ ನಿರೀಕ್ಷೆ 74.8 ವರ್ಷಗಳಾದರೆ ಗಂಡುಮಕ್ಕಳಿಗೆ 68.1 ವರ್ಷಗಳಾಗಿವೆ. ಚೀನಾದಲ್ಲಿ ಇದು ಅನುಕ್ರಮವಾಗಿ 65.6 ಮತ್ತು 61.3 ಆಗಿದ್ದರೆ ಬ್ರೆಜಿಲ್‌ನಲ್ಲಿ 45.5 ಮತ್ತು 41.8 ಆಗಿದೆ. (ಓಕ್ಲೆ.ಎ:ಪುಟ 32–34)

> ಸೋಂಕು ರೋಗಗಳಿಗೆ ಮತ್ತು ಮರಣಕ್ಕೀಡಾಗುವ ಸಂಭವ ಮಹಿಳೆಯರಿಗಿಂತ ಪುರುಷರಿಗೆ ಹೆಚ್ಚು ಎನ್ನಲು ತಮ್ಮ ಸಂಶೋಧನಾಧ್ಯಯನಗಳಿಂದ ಕ್ಷೇತ್ರಮಾಹಿತಿಗಳನ್ನು ಆ್ಯನ್ ಓಕ್ಲೆಯವರು ನೀಡುತ್ತಾರೆ. ಅವರ ಪ್ರಕಾರ, ಈ ಸೋಂಕು ಸೂಕ್ಷ್ಮತೆ (Susceptibility) "ಗಂಡು ಹೆಣ್ಣುಗಳಲ್ಲಿರುವ ವರ್ಣತಂತುಗಳ ರಚನೆಯಲ್ಲಿರುವ ವ್ಯತ್ಯಾಸಕ್ಕೆ ನೇರವಾಗಿ ಸಂಬಂಧಿಸಿದೆ. ಸೋಂಕುಗಳನ್ನು ತಡೆಗಟ್ಟುವ ದೇಹದ ಯಾಂತ್ರಿಕವ್ಯವಸ್ಥೆಯನ್ನು (mechanisms) ನಿಯಂತ್ರಿಸುವ ವಾಂಶಿಕ (genes) ಅಂಶಗಳು X ವರ್ಣತಂತುಗಳ ಮೂಲಕ ಹಾದುಹೋಗುತ್ತವೆ.... ಈ ಗಂಡಿನ ಹೆಚ್ಚು ಪ್ರಮಾಣದಲ್ಲಿ ಸೋಂಕಿಗೆ ಸೂಕ್ಷ್ಮತೆ (susceptibility) ಯು ಒಂದು ನಿರ್ದಿಷ್ಟ ಜೀವರಸಾಯನಿಕ ಆಧಾರವನ್ನು ಹೊಂದಿದೆ" (ಆ್ಯನ್ ಓಕ್ಲೆ).

ದಕ್ಷಿಣ ಏಷ್ಯಾದಲ್ಲಿ ಮಹಿಳೆಯರ ಜೈವಿಕ ಗರಿಮೆಯು ಅವರ ಮೇಲೆ ಹೇರಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಕೆಳಸ್ಥಾನದಿಂದಾಗಿ ಕಣ್ಣಿಗೆ ಬೀಳುತ್ತಿಲ್ಲ. ಇಂದು ಮಹಿಳೆಯರು ಪ್ರತಿಯೊಂದು ಕ್ಷೇತ್ರದಲ್ಲೂ ಪುರುಷರಿಗಿಂತ ಹಿಂದಿದ್ದಾರೆ. ಅರಿಸ್ಟಾಟಲರು ಪುರುಷತತ್ವವನ್ನು ಕ್ರಿಯಾಶೀಲ ವಾದುದೆಂದರೆ, ಹೆಣ್ತನವನ್ನು ನಿಷ್ಕ್ರಿಯವಾದುದೆಂದರು. ಅವರಿಗೆ ಹೆಣ್ಣು ಎನ್ನುವುದು ಒಂದು

> "ವಿರೂಪಗೊಂಡ ಗಂಡು, ಒಂದು ಆತ್ಮರಹಿತ ಜೀವ ಎಂದಾಗಿತ್ತು. ಅವರ ದೃಷ್ಟಿಯಲ್ಲಿ ಮಹಿಳೆಯ ದೈಹಿಕ ನಿಕೃಷ್ಟತೆ (inferiority) ಯು ಅವಳ ಸಾಮರ್ಥ್ಯಗಳನ್ನು, ವಿವೇಚನಾಶಕ್ತಿಯನ್ನು ಮತ್ತು ಅದರಿಂದಾಗಿ ಅವಳ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ. ಪುರುಷರು ಶ್ರೇಷ್ಠರಾಗಿರುವುದರಿಂದ ಮತ್ತು ಮಹಿಳೆಯರು ಕೀಳಾಗಿರು ವುದರಿಂದಲೇ ಪುರುಷರು ಆಳುವುದಕ್ಕೇ ಹುಟ್ಟುತ್ತಾರೆ; ಮಹಿಳೆಯರು ಆಳ್ವಿಕೆಗೆ ಒಳಗಾಗಲೆಂದೇ ಹುಟ್ಟುತ್ತಾರೆ. "ಪುರುಷನ ಧೈರ್ಯ ಆಜ್ಞಾಪಿಸುವುದರಲ್ಲಿ ವ್ಯಕ್ತವಾದರೆ, ಮಹಿಳೆಯದು ಆಜ್ಞಾಪಾಲಕಳಾಗುವುದರಲ್ಲಿ ವ್ಯಕ್ತವಾಗುತ್ತದೆ" (Ehrenreich Barbara and Deirdre English : 1988 : For Her own Good : 50 years of the Experts' Advice to women : p.19)

"ಮಹಿಳೆಯರಿಗೆ ದೇಹವೇ ಅಂತಿಮ ಗುರಿ" ಎಂದು ಸಿಗ್ಮಂಡ್ ಫ್ರಾಯ್ಡರು ಹೇಳಿಕೆ ನೀಡಿದರು. ಅವರ ದೃಷ್ಟಿಯಲ್ಲಿ ಸಹಜವಾದ ಮನುಷ್ಯ (normal human) ಎಂದರೆ ಪುರುಷನೇ. ಪುರುಷ ಜನನಾಂಗವನ್ನು ಹೊಂದಿರದ ಹೆಣ್ಣು ಒಬ್ಬ ವಕ್ರತೆಯುಳ್ಳ ಮಾನವ ಜೀವಿ. ಅವಳ ಇಡೀ ಮನೋಧರ್ಮವು ಈ ಕೊರತೆಯನ್ನು ತುಂಬಿಕೊಳ್ಳಲು ನಡೆಸುವ ಹೋರಾಟದ ಸುತ್ತ ಕೇಂದ್ರೀಕೃತ ವಾಗಿರುತ್ತದೆಂದು ಭಾವಿಸಲಾಗುತ್ತದೆ.

ಮಹಿಳೆಯರನ್ನು ಕುರಿತಂತೆ ಮಿಸ್ಟರ್ ಡಾರ್ವಿನ್ನರು ಹೇಳಬೇಕಾಗಿದ್ದುದು ಇಲ್ಲಿದೆ :

"ಮಹಿಳೆ ತನ್ನ ಮನೋಪ್ರವೃತ್ತಿ, ಅದರಲ್ಲೂ ಮುಖ್ಯವಾಗಿ ತನ್ನ ಅತಿಮೃದುತ್ವ ಮತ್ತು ಕಡಿಮೆ ಸ್ವಾರ್ಥಗಳಿಂದಾಗಿ ಪುರುಷನಿಗಿಂತ ಭಿನ್ನವಾಗಿರುವಂತೆ ಕಾಣುತ್ತಾಳೆ... ಮಹಿಳೆಯರಲ್ಲಿ ಅಂತರ್ದೃಷ್ಟಿಯ ಶಕ್ತಿ ಅಥವಾ ಶೀಘ್ರಗ್ರಹಿಕೆ ಮತ್ತು ಬಹುಶಃ ಅನುಕರಣೆಯ ಶಕ್ತಿಗಳು ಪುರುಷರಲ್ಲಿರುವುದಕ್ಕಿಂತ ಹೆಚ್ಚು ಶಕ್ತಿಯುತವಾಗಿರುವುದನ್ನು ಗುರುತಿಸಲಾಗಿದೆ ಎನ್ನುವುದನ್ನು ಸಾಮಾನ್ಯವಾಗಿ ಒಪ್ಪಿಕೊಳ್ಳಲಾಗಿದೆ. ಆದರೆ ಈ ಸಾಮಾರ್ಥ್ಯಗಳಲ್ಲಿ ಕನಿಷ್ಠ ಕೆಲವಾದರೂ ಕೀಳು ಜನಾಂಗಗಳ (lower races) ಗುಣಲಕ್ಷಣಗಳಾಗಿವೆ. ಅದರಿಂದಲೇ ಒಂದು ಗತಕಾಲ/ಪ್ರಾಚೀನವಾದ ಮತ್ತು ಸ್ಥಾನವಮಾನದ ನಾಗರಿಕತೆಯನ್ನು ಹೊಂದಿರುತ್ತವೆ." (Ehrenreich, Barabara and Deirdre English: Ibid: p.19)

ಅಂದರೆ ಮಹಿಳೆಯರು ಮತ್ತು ಪುರುಷರ ನಡುವಿನ ಜೈವಿಕ ವ್ಯತ್ಯಾಸಗಳು ಯಾವುದೇ ಪರಿಣಾಮ ಬೀರುವಂಥವಲ್ಲವೆಂದು ನೀವು ಹೇಳುತ್ತಿರುವಿರಾ ? ಮಹಿಳೆಯರು ಮಕ್ಕಳನ್ನು ಹೆರುತ್ತಾರೆನ್ನುವ ವಾಸ್ತವಾಂಶವು ಸಮಾಜ ಅವರಿಗೆ ಗೊತ್ತುಪಡಿಸಿರುವ ಪಾತ್ರಗಳಿಗೆ ಯಾವುದೇ ರೀತಿಯಲ್ಲಿ ಸಂಬಂಧಿಸಿಲ್ಲವೆ?

ಹೆಣ್ಣು-ಗಂಡುಗಳ ನಡುವೆ ಕೆಲವು ಜೈವಿಕ ವ್ಯತ್ಯಾಸಗಳಿವೆ ಎನ್ನುವುದನ್ನು ನಾವು ಅಲ್ಲಗಳೆಯುತ್ತಿಲ್ಲ. ಆದರೆ ಸಂಸ್ಕೃತಿ-ಸಂಸ್ಕೃತಿಗಳ ನಡುವೆ ಲಿಂಗಾಧರಿತ ಪಾತ್ರಗಳು ವಿಭಿನ್ನವಾಗಿರುವ ವಾಸ್ತವಾಂಶವು ಅಂಥ ಪಾತ್ರಗಳು ಕೇವಲ ಲಿಂಗವೊಂದನ್ನೇ ಆಧರಿಸಿವೆಯೆಂದಾಗಲೀ ಅಥವಾ ಅವುಗಳಿಗೆ ವಿವರಣೆ ನೀಡುವುದಾಗಲೀ ಸಾಧ್ಯವಿಲ್ಲವೆನ್ನುವುದನ್ನು ತೋರಿಸುತ್ತದೆ. ನಾವು ವಿಜ್ಞಾನದ ಒಂದು ಸರಳ ನಿಯಮವನ್ನು ನೆನಪಿಡಬೇಕು. ವೈವಿಧ್ಯಮಯವಾದವುಗಳಂಥ (ಲಿಂಗತ್ವದ ಪಾತ್ರಗಳನ್ನು) (ಜನನನಾಂಗ ಮತ್ತು ವರ್ಣತಂತುಗಳು ಅಥವಾ ಲಿಂಗ) ಸ್ಥಿರಾಂಶ (constants) ಗಳಿಂದ ವಿವರಣೆ ನೀಡಲು ಸಾಧ್ಯವಿಲ್ಲ. ಒಂದುವೇಳೆ ಜೀವವಿಜ್ಞಾನವೇ ನಮ್ಮೆಲ್ಲ ಪಾತ್ರಗಳನ್ನು ನಿರ್ಧರಿಸುವುದಾದಲ್ಲಿ ವಿಶ್ವದ ಪ್ರತಿಯೊಬ್ಬ ಮಹಿಳೆಯೂ ಅಡಿಗೆ ಮಾಡುತ್ತಾ, ಸ್ವಚ್ಛಗೊಳಿಸುತ್ತಾ ಮತ್ತು ಹೊಲಿಯುತ್ತಾ ಇರಬೇಕಿತ್ತು. ಆದರೆ ಅದು ಹಾಗಿಲ್ಲವೆನ್ನುವುದಕ್ಕೆ ಸ್ಪಷ್ಟ ಕಾರಣ, ಅತ್ಯಂತ ವೃತ್ತಿಪರರಾದ ಅಡುಗೆಯವರು, ಅಗಸರು ಮತ್ತು ದರ್ಜಿಗಳು ಪುರುಷರಾಗಿದ್ದಾರೆ.

ನಾವೇನು ಹೇಳುತ್ತಿದ್ದೇವೆಂದರೆ, ಮಹಿಳೆ ಮತ್ತು ಪುರುಷರ ನಡುವೆ ಈಗಿರುವ ಸಮರ್ಥನೀಯವಲ್ಲದ ಅಸಮಾನತೆಗಳಿಗೆ ಲಿಂಗವಾಗಲೀ, ಪ್ರಕೃತಿಯಾಗಲೀ ಕಾರಣವಲ್ಲ. ಜಾತಿಗಳು, ವರ್ಗಗಳು ಮತ್ತು ಜನಾಂಗ ಗಳ ನಡುವೆ ಇರುವ ಅಸಮಾನತೆಗಳಂತೆ ಇವು ಕೂಡ ಮಾನವ ನಿರ್ಮಿತವಾದವು. ಇವು ಚಾರಿತ್ರಿಕ ನಿರ್ಮಿತಿಗಳು. ಆದ್ದರಿಂದಲೇ ಅವುಗಳನ್ನು ಪ್ರಶ್ನಿಸಲು, ಸವಾಲೆಸೆಯಲು ಮತ್ತು ಬದಲಿಸಲು ಸಾಧ್ಯವಿದೆ. ಮಹಿಳೆಯೊಬ್ಬಳು ಮಕ್ಕಳನ್ನು ಹೊಂದಿರಬಹುದು. ಆದರೆ ಅದು ಅವಳ ಕೀಳುದರ್ಜೆಗೆ ಮತ್ತು ಅಧೀನತೆಗೆ ಕಾರಣವಾಗಬಾರದು; ಅವಳ ಶಿಕ್ಷಣ, ತರಬೇತಿ ಅಥವಾ ಉದ್ಯೋಗಾವಕಾಶಗಳನ್ನು ನಿರ್ಧರಿಸಬಾರದು. ವಿಭಿನ್ನ ದೇಹಗಳು ಮತ್ತು ವಿಭಿನ್ನ ಕಾರ್ಯಚಟುವಟಿಕೆಗಳನ್ನು ಹೊಂದಿರು ವುದೇ ಅಸಮಾನತೆಗೆ ಏಕೆ ಕಾರಣವಾಗಬೇಕು? ಸಮಾನರಾಗಿರಲು, ಸಮಾನ ಹಕ್ಕುಗಳನ್ನು ಮತ್ತು ಅವಕಾಶಗಳನ್ನು ಹೊಂದಲು ನೀವು ಇತರರ ಹಾಗೇ ಇರಬೇಕಿಲ್ಲ.

ಮರಿಯಾ ಮೀಸ್ ಎಂಬ ಸ್ತ್ರೀವಾದಿ ಚಳವಳಿಗಾರರು ಹಾಗೂ ಪಂಡಿತರು 'ಸೋಷಿಯಲ್ ಆರಿಜಿನ್ಸ್ ಆಫ್ ದಿ ಸೆಕ್ಷುಯಲ್ ಡಿವಿಜನ್ ಆಫ್ ಲೇಬರ್' ಎಂಬ ತಮ್ಮ ಕೃತಿಯಲ್ಲಿ ಹೀಗೆ ಬರೆಯುತ್ತಾರೆ:

"... ಗಂಡ್ತನ ಮತ್ತು ಹೆಣ್ತನಗಳು ಜೈವಿಕ ಕೊಡುಗೆಗಳಲ್ಲ. ಬದಲಾಗಿ ಅವು ಒಂದು ಸುದೀರ್ಘ ಐತಿಹಾಸಿಕ ಪ್ರಕ್ರಿಯೆಯ ಫಲವಾಗಿವೆ. ಗಂಡ್ತನ ಮತ್ತು ಹೆಣ್ತನಗಳು ಪ್ರತಿಯೊಂದು ಚಾರಿತ್ರಿಕ ಯುಗದಲ್ಲಿ ಬೇರೆ ಬೇರೆಯಾದ ಪರಿಭಾಷೆಗೊಳಪಟ್ಟವೆ. ಆ ಪರಿಭಾಷೆಯು ಆ ಯುಗಗಳಲ್ಲಿದ್ದ ಪ್ರಧಾನ ಉತ್ಪಾದನಾ ವಿಧಾನವನ್ನು ಅವಲಂಬಿಸಿತ್ತು.... ಆದ್ದರಿಂದ ಸ್ತ್ರೀಪುರುಷರು ತಮ್ಮದೇ ದೇಹ ಗಳೊಂದಿಗೆ ಗುಣಾತ್ಮಕವಾಗಿ ಬೇರೆ ಬೇರೆಯಾದ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾರೆ. ಹೀಗೆ ಮಾತೃಪ್ರಧಾನ (matristic) ಸಮಾಜಗಳಲ್ಲಿ ಹೆಣ್ತನವನ್ನು ಎಲ್ಲಾ ಉತ್ಪಾದಕತೆಯ ಸಾಮಾಜಿಕ ಮಾದರಿ, ಜೀವೋತ್ಪಾದನೆಯ ಒಂದು ಪ್ರಮುಖ ಕ್ರಿಯಾತ್ಮಕ ತತ್ತ್ವ ಎಂದು ವ್ಯಾಖ್ಯಾನಿಸಲಾಗುತ್ತಿತ್ತು. ಮಹಿಳೆಯರೆಲ್ಲರನ್ನು 'ತಾಯಂದಿರು' ಎಂದು ಪರಿಭಾಷಿಸಲಾಗುತ್ತಿತ್ತು. ಆದರೆ ಆಗ 'ತಾಯಂದಿರು' ಪದಕ್ಕೆ ಬೇರೆಯೇ ಆದ ಅರ್ಥವಿತ್ತು. ಬಂಡವಾಳ ಷಾಹಿ ಪರಿಸ್ಥಿತಿಗಳಲ್ಲಿ ಎಲ್ಲಾ ಮಹಿಳೆಯರನ್ನು ಸಾಮಾಜಿಕವಾಗಿ 'ಗೃಹಿಣಿಯರು' (ಪುರುಷರೆಲ್ಲರು ಅನ್ನ ಸಂಪಾದಿಸುವವರು) ಎಂದು ಪರಿಭಾಷಿಸ ಲಾಗಿತ್ತು. ತಾಯ್ತನ ಎನ್ನುವುದು ಈ ಗೃಹಿಣಿ-ರೋಗಲಕ್ಷಣದ (ಸಿಂಡ್ರೋಂ) ಭಾಗವೇ ಆಗಿದೆ. ಹೆಣ್ತನದ ಮಾತೃಪ್ರಧಾನತೆಗೆ ಸಂಬಂಧಿಸಿದ ಪರಿಭಾಷೆಗೂ ಮತ್ತು ಆಧುನಿಕ ಕಾಲದ ಪರಿಭಾಷೆಗೂ ನಡುವಿನ ವ್ಯತ್ಯಾಸವೆಂದರೆ, ಇಂದಿನದು ಕ್ರಿಯಾಶೀಲ, ಸೃಜನಶೀಲ, ಉತ್ಪಾದನಾತ್ಮಕ (ಅಂದರೆ, ಮಾನವೀಯ) ಗುಣಗಳಿಗೆ ಹೊರತಾಗಿದೆ" (Mies, Maria : 1988 : The Social Origins of the Sexual Division of Labour in Women : The Last Colony : p. 73).

ಒಂದು ವೇಳೆ ಇದು ಹೀಗಿದ್ದಲ್ಲಿ, ಗಂಡು ಮತ್ತು ಹೆಣ್ಣುಗಳನ್ನು ಗಂಡ್ತನದ ಮತ್ತು ಹೆಣ್ತನದ ವ್ಯಕ್ತಿಗಳನ್ನಾಗಿ ಸಮಾಜವು ಹೇಗೆ ಪರಿವರ್ತಿಸುತ್ತದೆ?

ಇದು ಕುಟುಂಬಗಳು ಮತ್ತು ಸಮಾಜಗಳಲ್ಲಿ ಆಗುವ ಒಂದು ನಿರಂತರ ಪ್ರಕ್ರಿಯೆಯಾದ ಸಾಮಾಜೀಕರಣ ಅಥವಾ ಲಿಂಗತ್ವೀಕರಣದ ಪ್ರಕ್ರಿಯೆಯ ಮೂಲಕ ಆಗುತ್ತದೆ.

ಆಗತಾನೇ ಹುಟ್ಟಿದ ಮಗುವನ್ನು ಆ ಕೂಡಲೆ ಅದರ ಲಿಂಗದಿಂದ ವರ್ಗೀಕರಿಸಲಾಗುತ್ತದಷ್ಟೇ ಅಲ್ಲ, ಅದಕ್ಕೆ ಲಿಂಗತ್ವವನ್ನೂ ನಿಗದಿಪಡಿಸ ಲಾಗುತ್ತದೆನ್ನುವುದು ನಮಗೆಲ್ಲಾ ತಿಳಿದಿದೆ. ಹುಟ್ಟಿದ ಮಗುವಿಗೆ ನೀಡುವ ಸ್ವಾಗತ ಕೂಡ ಕೆಲವು ಸಂಸ್ಕೃತಿಗಳಲ್ಲಿ ಹೇಗೆ ಭಿನ್ನವಾಗಿರುತ್ತದೆನ್ನುವುದನ್ನು ನಾವು ಕಂಡಿದ್ದೇವೆ. ಮಕ್ಕಳನ್ನು ಸಂಬೋಧಿಸುವ, ಎತ್ತಿಕೊಳ್ಳುವ, ನೋಡಿಕೊಳ್ಳುವ ಮತ್ತು ಪೋಷಾಕುಗಳನ್ನು ಹಾಕುವುದರಲ್ಲಿನ ವ್ಯತ್ಯಾಸ ಗಳನ್ನು, ಈ ನೀತಿ ನಿಯಮಗಳ ಮೂಲಕ ತಾವು ಹುಟ್ಟಿದ ಸಮಾಜದ ಒಂದು ಭಾಗವಾಗಲು ಅವರು ಹೇಗೆ ವರ್ತಿಸಬೇಕೆನ್ನುವುದನ್ನು ಬೋಧಿಸಲಾಗುತ್ತದೆ. ಇದನ್ನೇ ಸಾಮಾಜೀಕರಣ ಎನ್ನಲಾಗುತ್ತದೆ. ಮಕ್ಕಳಿಗೆ ತಮ್ಮ ಲಿಂಗತ್ವದ ಪಾತ್ರಗಳನ್ನು ಬೋಧಿಸುವ ಸಾಮಾಜೀಕರಣದ ಒಂದು ನಿರ್ದಿಷ್ಟ ಪ್ರಕ್ರಿಯೆಯನ್ನು ಲಿಂಗತ್ವೀಕರಣ (gendering) ಅಥವಾ ಲಿಂಗತ್ವ ಬೋಧನೆ (gender indoctrination) ಎಂದೂ ಕರೆಯಲಾಗುತ್ತದೆ. ಮಕ್ಕಳಿಗೆ ಬೇರೆ ಬೇರೆ ಸಾಮಾಜಿಕ ಸಂಸ್ಥೆಗಳು ವ್ಯಕ್ತಿತ್ವದ ಗಂಡ್ತನ ಮತ್ತು ಹೆಣ್ತನಗಳನ್ನು ಮತ್ತು ಅವುಗಳನ್ನು ತಮ್ಮ ವರ್ತನೆ, ಧೋರಣೆಗಳು ಮತ್ತು ಪಾತ್ರಗಳಲ್ಲಿ ಅಳವಡಿಸಿ (internalise) ಕೊಳ್ಳುವುದನ್ನು ಬೋಧಿಸುತ್ತವೆ.

(ಮುಂದುವರಿಯುವುದು)

ಗ್ರಾಮೀಣ

# ಮನೆಯಿಂದ ಆಚೆ

● ಹೆಚ್.ಎಸ್. ರಾಜೇಶ್ವರಿ

ಪದ್ಮಳಿಗೆ ತಂದೆ-ತಾಯಿ ಯಾರು ಇರಲಿಲ್ಲ. ಆಕೆಯ ಅಣ್ಣನೇ ಮುಂದೆ ನಿಂತು ಮದುವೆಮಾಡಿದ್ದ. ತಂದೆ-ತಾಯಿ ಇಲ್ಲದಿದ್ದರೂ ಆಕೆಯನ್ನು ಒಪ್ಪಿ ಗಂಡನ ಮನೆಯವರು ಮನೆ ತುಂಬಿಸಿ ಕೊಂಡಿದ್ದರು.

ಆದರೆ ಆಕೆ ಗಂಡನಮನೆಯಲ್ಲಿ ನೆಮ್ಮದಿಯಾಗಿದ್ದುದು ಒಂದು ವರ್ಷ ಮಾತ್ರ. ಮದುವೆಯಾಗಿ ವರ್ಷ ಕಳೆಯುತ್ತಲೇ ಅತ್ತೆ ಹಾಗೂ ಗಂಡ ಆಕೆಯನ್ನು ಹಿಂಸಿಸತೊಡಗಿದರು. ವರದಕ್ಷಿಣೆಗಾಗಿ ಆಕೆಯನ್ನು ಪೀಡಿಸತೊಡಗಿದರು. ತವರು ಮನೆಯಿಂದ ಏನು ತಂದಿದ್ದೀಯಾ ಎಂದು ಮೂದಲಿಸ ತೊಡಗಿದರು.

ಈ ನಡುವೆ ಗ್ರಾಮದಲ್ಲಿ, ಆಸಕ್ತ ಮಹಿಳೆಯರೆಲ್ಲಾ ಸೇರಿ ಒಂದು ಸ್ವ-ಸಹಾಯ ಸಂಘವನ್ನು ಪ್ರಾರಂಭಿಸಿದರು. ಪದ್ಮಳು ಸಹ ಸಂಘಕ್ಕೆ ಸೇರಿ ಹಣವನ್ನು ಉಳಿತಾಯ ಮಾಡುತ್ತಾ ಸಂಘದ ಸಭೆಯಲ್ಲಿ ತಪ್ಪದೇ ಭಾಗವಹಿಸತೊಡಗಿದಳು. ಒಂದು ದಿನ ಇದ್ದಕ್ಕಿದ್ದಂತೆ ಪದ್ಮಳ ಗಂಡ, ಅತ್ತೆ ಇಬ್ಬರೂ ಸಂಘದ ಸದಸ್ಯರನ್ನು ಭೇಟಿ ಮಾಡಿ ಪದ್ಮಳನ್ನು ಸಂಘದಿಂದ ತೆಗೆದು ಹಾಕಬೇಕೆಂದು ಕೇಳಿದರು. ಸಂಘದಿಂದ ಯಾವುದೇ ಕಾರಣವಿಲ್ಲದೆ ತೆಗೆದುಹಾಕಲು ಸಾಧ್ಯವಿಲ್ಲ, ಅಲ್ಲದೇ ಆಕೆ ಸಂಘದ ಸಭೆಗೆ ಸರಿಯಾಗಿ ಹಾಜರಾಗುವುದರ ಜೊತೆಯಲ್ಲಿ, ಹಣವನ್ನು ಸರಿಯಾಗಿ ಉಳಿತಾಯ ಮಾಡುತ್ತಿದ್ದಾಳೆ ಎಂದು ತಿಳಿಸಲಾಯಿತು. "ನೀವೆಲ್ಲ ಅದ್ಹೇಗೆ ಅವಳನ್ನು ಸಂಘದಲ್ಲಿ ಇಟ್ಟುಕೊಳ್ತೀರಾ ನಾವೂ ನೋಡ್ತೀವಿ ಅವಳು ಅಷ್ಟು ಜೋರಾಗಿರುವುದು ನಿಮ್ಮಿಂದಲೇ. ಇಷ್ಟು ದಿನ ಏನೂತಿಳಿಯದೆ ಮೂಕಿಯಂತೆ ಇದ್ಲು, ಈಗ ನಮಗೇ ಎದುರುತ್ತರ ಕೊಡ್ತಾಳೆ! ಕಂಪ್ಲೈಂಟ್ ಕೊಟ್ಟು ನಮ್ಮನ್ನೆಲ್ಲಾ ಕಂಬಿ ಎಣಿಸೊ ಹಾಗೆ ಮಾಡ್ತೀನಿ ಅಂತಾಳೆ. ಈ ಮಾತು ಅವಳ ಬಾಯಿಂದ ಬರ್ಬೇಕಾದ್ರೆ ನೀವೇ ಕಾರಣ. ಆಕೆ ಮೀಟಿಂಗ್‌ಗೆ ಬಂದೇ ಇಷ್ಟು ಮಾತು ಕಲ್ತಿರೋದು" ಎಂದು ಅವರಿಬ್ಬರೂ ಕೈಯಾಡಿಸುತ್ತಾ ದೊಡ್ಡಗಂಟಲಲ್ಲಿ ಕೂಗುತ್ತಾ ಹೋದರು.

ತಮಾಷೆಯೆಂದರೆ ಈ ಸ್ವಸಹಾಯಸಂಘ ಶುರುಮಾಡಿ ಒಂದು ತಿಂಗಳೂ ಕಳೆದಿರಲಿಲ್ಲ. ಒಂದು ತಿಂಗಳಲ್ಲಿ ಎರಡು ಸಭೆ ಮಾಡಿದ್ದರು. ಈ ಎರಡೂಸಭೆಯಲ್ಲಿ ಹಣಸಂಗ್ರಹಿಸಿ ಪುಸ್ತಕ ಬರೆದು ಕೊಡುವುದರಲ್ಲೇ ಸಮಯ ಆಗಿತ್ತು. ಜೊತೆಗೆ ಇಂತಹ ವಿಚಾರಗಳನ್ನು ಮಾತನಾಡುವಷ್ಟು, ಚರ್ಚೆಮಾಡುವಷ್ಟು ಸಮಯ, ತಿಳಿವಳಿಕೆ, ಒಡನಾಟ ಸಹ ಬೆಳೆದಿರಲಿಲ್ಲ. ಹಾಗಾಗಿ ಪದ್ಮ ಸಹ ತನ್ನ ನೋವನ್ನು ಸಭೆಯಲ್ಲಿ ಹಂಚಿಕೊಂಡಿರಲಿಲ್ಲ. ಅವಳ ಸಮಸ್ಯೆಗಳಿಗೆ 'ನೀನು ಹೀಗೆ ಮಾಡು' ಎಂದು ಯಾರೂ ಸಲಹೆ ಸಹ ನೀಡಿರಲಿಲ್ಲ. ಪುರುಷ ಪ್ರಧಾನತೆಯು ಕುಟುಂಬಗಳಲ್ಲಿ ಎಷ್ಟು ಬಲವಾಗಿ ಬೇರೂರಿದೆಯೆಂದರೆ ಮದುವೆಯಾದ ತಕ್ಷಣ ಆಕೆಯನ್ನು ನೀರಿನಿಂದ ಮೀನು ತೆಗೆದಂತೆ ಇತರ ಎಲ್ಲಾ ಸಂಬಂಧ ಗಳಿಂದ, ನೆರವು, ರಕ್ಷಣೆ ನೀಡುವ ವ್ಯವಸ್ಥೆಗಳನ್ನೂ ಮುಚ್ಚಿ ಆಕೆ ಒಂಟಿಯಾಗುವಂತೆ ಮಾಡುತ್ತಾರೆ. ಗಂಡನ ಮನೆಯ ಸಂಬಂಧಗಳನ್ನು ಸಾಮಾಜಿಕವಾಗಿ, ಹಾಗೂ ಸಾಂಸ್ಕೃತಿಕವಾಗಿ ವೈಭವೀಕರಿಸಿ ಆಕೆ ಸಂಪೂರ್ಣವಾಗಿ ಅವಲಂಬಿತಳಾಗುವಂತೆ ಮಾಡುವುದರ ಮೂಲಕ ಆಕೆಯನ್ನು ಅಸಹಾಯಕಳನ್ನಾಗಿಸಲಾಗುತ್ತದೆ. ತಂದೆ-ತಾಯಿ, ಅಣ್ಣ-ತಮ್ಮಂದಿರು, ಬಂಧುಬಾಂಧವರು, ಊರಿನವರು, ಕೊನೆಗೆ ಪಕ್ಕದ ಮನೆಯವರು ಸಹ ಆಕೆಯ ನೆರವಿಗೆ ಬರದಂತಹ ಸ್ಥಿತಿ ಏರ್ಪಡುತ್ತದೆ. ಆಕೆಯ ಸಹಾಯಕ್ಕೆ ಬರುವಂತಹ ಎಲ್ಲ ವ್ಯವಸ್ಥೆಗಳನ್ನು ಪುರುಷ ಪ್ರಾಧಾನ್ಯದ ಮೂಲಕ ನಾಶಪಡಿಸಲಾಗುತ್ತದೆ. ಮೌಲ್ಯಗಳ ಹೆಸರಿನಲ್ಲಿ ನಿಯಮಗಳನ್ನು ಹೇರಿ ಹೆಣ್ಣುಮಕ್ಕಳು ತವರುಮನೆಗೆ ಸಹ ಹೋಗದಂತಹ ವಾತಾವರಣವನ್ನು ಸೃಷ್ಟಿಸಿ ಖಾಯಂ ಆದ ಲಕ್ಷ್ಮಣ ರೇಖೆಯನ್ನು ಹಾಕಿಬಿಟ್ಟಿರುತ್ತಾರೆ.

ಪದ್ಮಳ ವಿಷಯದಲ್ಲಿ ಆಗಿದ್ದೂ ಇದೆ. ಆಕೆ ತನ್ನ ಸಮಸ್ಯೆಯನ್ನು, ನೋವನ್ನು ಯಾರ ಬಳಿಯೂ ಚರ್ಚೆ ಮಾಡದಿದ್ದರೂ ಆಕೆ ಸಂಘಕ್ಕೆ ಸೇರಿರುವುದು, ಸಭೆಗೆ ಹೋಗುವುದೇ ಗಂಡನಲ್ಲಿ, ಆಕೆಯ ಅತ್ತೆಯ ಮನಸ್ಸಿನಲ್ಲಿ ಅಭದ್ರತೆಯನ್ನು ಹುಟ್ಟಿಹಾಕಿತ್ತು. ಈ ಅಭದ್ರತೆಯಿಂದಾಗಿಯೆ ಕೌಟುಂಬಿಕ ಹಿಂಸೆ ಪೈಶಾಚಿಕ ಸ್ವರೂಪವನ್ನು ಪಡೆಯುತ್ತದೆ. ಗಂಡನ ಮನೆಯ ಹೊರತಾದ ಸಂಬಂಧಗಳು ಪುರುಷ ಪ್ರಧಾನ ಮೌಲ್ಯಗಳ ಹಿನ್ನೆಲೆಯಲ್ಲಿ ಗೌಣವಾಗಲೇಬೇಕು. ಪುರುಷ ಪ್ರಧಾನತೆಯ ಬಲವಿರುವುದು ಪ್ರತಿಯೊಬ್ಬ ಪುರುಷನಲ್ಲಲ್ಲ, ಆತ ತನ್ನ ರಕ್ಷಣೆಗಾಗಿ ನಿರ್ಮಿಸಿಕೊಂಡ, ಸೃಷ್ಟಿಸಿಕೊಂಡ ಮೌಲ್ಯಗಳ ಹಾಗೂ ವ್ಯವಸ್ಥೆಗಳ ಕವಚದಲ್ಲಿ. ಇದು ಸ್ತ್ರೀಯರ ಚಲನವಲನಗಳನ್ನೂ ನಿಷೇಧಿಸುತ್ತದೆ. ಆಕೆಯ ಮೇಲೆ ದಿಗ್ಬಂಧನ ಹೇರುತ್ತದೆ. ಇದರ ಪರಿಣಾಮ ಆಕೆ ಅಸಹಾಯಕಳಾಗುತ್ತಾಳೆ, ಒಂಟಿಯಾಗುತ್ತಾಳೆ. ಅನಿವಾರ್ಯವಾಗಿ ಅವರನ್ನೇ ಅವಲಂಬಿಸಬೇಕಾಗುತ್ತದೆ. ಹೀಗಿದೆ ಒಂದು ಕಲ್ಲಿನಲ್ಲಿ ಎರಡು ಹಕ್ಕಿ ಹೊಡೆಯುವ ಪುರುಷ ಪ್ರಧಾನ ಮೌಲ್ಯಗಳ ಹುನ್ನಾರ! ❑

*ಸಮಾಜದ ಚರಿತ್ರೆಯಲ್ಲಿ ಮಾತೃ ಪ್ರಧಾನತೆಯು ಪಿತೃ ಪ್ರಧಾನತೆಗೆ ಹೇಗೆ ಶರಣಾಯಿತು ಎಂಬ ದೊಡ್ಡ ಕಥಾನಕವೇ ಇದೆ. ಶ್ರಮ ವಿಭಜನೆಯ ಕುತರ್ಕದಲ್ಲಿ ಅವಲ ಆರ್ಥಿಕತೆಯನ್ನು ನಿರ್ಬಂಧಿಸಿಲಾಯಿತಾದರೆ, ತಾಯ್ತನವನ್ನು ನೆಪವಾಗಿಸಿ ಅವಳ ಭಾವಜಗತ್ತನ್ನು ಬ್ಲಾಕ್‌ಮೇಲ್ ಮಾಡಿ ಅವಳನ್ನು ಗೃಹಬಂಧಿಯನ್ನಾಗಿ ಮಾಡಿ ಅವಳ ಚಲನಶೀಲತೆಯನ್ನು ಅಪಹರಿಸಲಾಯಿತು. ಈ ಬಾಹ್ಯ ನೆಪಗಳನ್ನೇ ಸ್ಥಿರಗೊಳಿಸಿಬಿಡುವ ಇನ್ನೊಂದು ದೊಡ್ಡ ಕುತಂತ್ರವಾಗಿ, ಅವಳ ಲೈಂಗಿಕತೆಯನ್ನು ನಿರ್ಬಂಧಿಸುವ ವಿವಾಹ ಎಂಬ ಸಂಸ್ಥೆಯನ್ನು ಹುಟ್ಟುಹಾಕಲಾಯಿತು. ಈ ವಿವಾಹದ ನಿಯಮಗಳಲ್ಲಿ ಆರ್ಥಿಕ ದಿಗ್ಬಂಧನ, ಲೈಂಗಿಕತೆಯ ದಿಗ್ಬಂಧನ ಹಾಗೂ ಗೃಹದಿಗ್ಬಂಧನಗಳಲ್ಲಿ ಸೆರೆಯಾಗಿ ಹೋದ ಹೆಣ್ಣಿನ ಬದುಕು ಸಂಪೂರ್ಣವಾಗಿ ಪುರುಷಾಧೀನವಾಗಿ ಹೋಯಿತು. ಅವಳ ಚೈತನ್ಯಕ್ಕೆ ಸ್ವತಂತ್ರ ಅಸ್ತಿತ್ವವೆಂಬುದೇ ಇಲ್ಲವಾಯಿತು. 'ಗೃಹಿಣಿ' ಎಂಬುದಷ್ಟೇ ಈಗಿನ ಅವಳ ಚಹರೆ.*

–**ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ

ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಚಿಕ್ಕ ವಯಸ್ಸಿನ ತಾಯಂದಿರು ಪ್ರಸವದ ನಂತರ ಮರಣಿಸುವುದು ಹೊಸ ವಿಷಯವೇನಲ್ಲ. ಇಲ್ಲಿ ಇತರ ಅಭಿವೃದ್ಧಿಶೀಲ ದೇಶಗಳಲ್ಲಿರುವಂತೆ ತಾಯಂದಿರ ಮರಣದ ಪ್ರಮಾಣ ಹೆಚ್ಚಾಗಿದೆ. ಒರಿಸ್ಸಾರಾಜ್ಯದ ಕೊರಾಪುಟ್‌ನಲ್ಲಿ ಪ್ರತಿ ಎರಡು ಗಂಟೆಗೆ ತಾಯಿಯೊಬ್ಬಳು ಗರ್ಭಾವಸ್ಥೆಗೆ ಸಂಬಂಧಿಸಿದ ಕ್ಲಿಷ್ಟತೆಗಳಿಂದಾಗಿ ಮರಣ ಹೊಂದುತ್ತಾಳೆನ್ನಲಾಗಿದೆ. ಇದಕ್ಕೆ ಕಾರಣ ಮೂಲಭೂತ ಆರೋಗ್ಯಸೇವೆ ಅಥವಾ ವೈದ್ಯಕೀಯ ಸೇವಾಸೌಲಭ್ಯಗಳ ಕೊರತೆಯಾಗಿದೆ. ಸರಕಾರದ ಕಾರ್ಯಯೋಜನೆಯಲ್ಲಿ ತಾಯಂದಿರ ಮರಣ ಸಂಖ್ಯೆಯನ್ನು ಕಡಮೆಮಾಡುವುದು ಆದ್ಯತೆಗಳಲ್ಲೊಂದಾಗಿದೆ. ಅಂದ ಮೇಲೆ ಗುರಿ ಮುಟ್ಟಲು ಇರುವ ತೊಂದರೆಯಾದರೂ ಏನು ಎನ್ನುವುದು ಈಗ ನಮ್ಮ ಮುಂದಿನ ಪ್ರಶ್ನೆಯಾಗಿದೆ.



# ತಾಯಂದಿರ ಮರಣ : ನಿಮಗಿದು ಗೊತ್ತೆ?

● ವೆಂ. ವನಜ, ಮೈಸೂರು

ಆರು ವರ್ಷಗಳ ಹಿಂದೆ ಜಗತ್ತಿನ ನಾಯಕರ್ಯರು ಅಭಿವೃದ್ಧಿಯ ಎಂಟುಗುರಿಗಳಲ್ಲಿ ಶತಮಾನದ ತಾಯಂದಿರ ಉತ್ತಮ ಆರೋಗ್ಯವನ್ನು ಐದನೆಯ ಗುರಿಯನ್ನಾಗಿ ಬದ್ಧತೆಯ ಪಟ್ಟಿಯಲ್ಲಿ ಸೇರಿಸಿದ್ದರು. ಈ ನಾಯಕರಿಗೆ ತಾಯಂದಿರ ಮರಣವನ್ನು ತಡೆಗಟ್ಟುವ ಕಡೆ ಹೆಚ್ಚು ಗಮನವನ್ನು ನೀಡುವಂತೆ ಯುನಿಸೆಫ್ (UNICEF) ಕೂಡ ತಿಳಿಸಿತ್ತು. 1990ರಿಂದ ಇದು ಮಾನವಾಭಿವೃದ್ಧಿಯ ಮಾಪನಗಳಲ್ಲೊಂದೆಂದು ಪರಿಗಣಿತವಾಗಿದೆ. ಆದರೆ ಈ ನಿಟ್ಟಿನಲ್ಲಿ ಯಾವುದೇ ಪ್ರಗತಿ ಕಂಡುಬಂದಿಲ್ಲದಿರುವುದು ಯುನಿಸೆಫ್‌ಗೆ ಮನವರಿಕೆಯಾಗಿದೆ.

ತಾಯಂದಿರ ಮರಣ ಪ್ರಮಾಣವನ್ನು ಅಂಕಿಅಂಶಗಳಲ್ಲಿ ಹೇಳಬೇಕೆಂದರೆ, ಅಭಿವೃದ್ಧಿಶೀಲ ದೇಶಗಳಲ್ಲಿ ಮಗುವನ್ನು ಹೆರುವ ಪ್ರತಿ ಹೆಣ್ಣು ಮರಣ ಹೊಂದಲಿರುವ ಹದಿಮೂರು ಮಂದಿಯಲ್ಲಿ ಒಬ್ಬಳಾಗಿರುತ್ತಾಳೆ. ಆದರೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಈ ಸಂಖ್ಯೆ ನಾಲ್ಕುಸಾವಿರದ ನೂರು(4,100) ಮಂದಿಯಲ್ಲಿ ಒಂದಾಗಿರುತ್ತದೆ. ಒಂದು ಅಂದಾಜಿನ ಪ್ರಕಾರ, ವಿಶ್ವದಲ್ಲಿ ಗರ್ಭಾವಸ್ಥೆ ಮತ್ತು ಪ್ರಸವಗಳಿಂದಾಗಿ ಪ್ರತಿವರ್ಷ ಮರಣಹೊಂದುವ ಮಹಿಳೆಯರ ಸಂಖ್ಯೆ ಐದುಲಕ್ಷದ ಹದಿನೈದುಸಾವಿರ (5,15,000) ಎನ್ನಲಾಗಿದೆ. ಇವುಗಳಲ್ಲಿ ಶೇಕಡ ತೊಂಬತ್ತೊಂಬತ್ತು ಮರಣಗಳು ಅಭಿವೃದ್ಧಿಶೀಲ ದೇಶಗಳಲ್ಲಾಗಿರುತ್ತವೆ. ಅಂದರೆ, ತಾಯಂದಿರ ಮರಣಕ್ಕೆ ಸಂಬಂಧಿಸಿದ ಅಂಕಿಅಂಶಗಳ ವ್ಯತ್ಯಾಸ ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಶೀಲ ದೇಶಗಳ ನಡುವಿನದಾಗಿದೆ. ಮಹಿಳೆಯರ ಜೀವಗಳನ್ನು ಅಗತ್ಯಗಮನ ಮತ್ತು ಬಂಡವಾಳ ಹೂಡಿಕೆಗಳಿಂದ ಉಳಿಸಬಹುದೆನ್ನುವುದರ ಸೂಚನೆ ಇದಾಗಿದೆ.

ಪ್ರಸವಾವಧಿಯಲ್ಲಿ ಸಾಮಾನ್ಯವಾಗಿ ಕಂಡುಬರುವ ತೊಂದರೆಗಳೆಂದರೆ ಪ್ರಸವಾನಂತರದ ರಕ್ತಸ್ರಾವ, ಅಸುರಕ್ಷಿತ ಗರ್ಭಪಾತ, ತಡೆಯುಂಟಾದ (obstructed) ಪ್ರಸವ ಮತ್ತು ಗರ್ಭಾವಸ್ಥೆಯ ರಕ್ತದೊತ್ತಡ, ರಕ್ತಹೀನತೆ, ಸೋಂಕು, ಇತ್ಯಾದಿ. ಇವು ಗರ್ಭಾವಸ್ಥೆ ಮತ್ತು ಪ್ರಸವಕಾಲಾವಧಿಯಲ್ಲಿ ಯಾವುದೇ ಎಚ್ಚರಿಕೆಯ ಮುನ್ಸೂಚನೆ ಇಲ್ಲದೆಯೇ ಎದುರಾಗಬಹುದು. ಅಂಥ ಸಂದರ್ಭಗಳಲ್ಲಿ ಗುಣಮಟ್ಟದ ಪ್ರಸವ ಸಂಬಂಧೀ ತುರ್ತು ಸೇವೆಗಳು ಅಂದರೆ ಜೀವರಕ್ಷಕ ಔಷಧಿಗಳು, ಸೋಂಕು ನಿರೋಧಕಗಳು (antibiotics),ರಕ್ತ ನೀಡುವಿಕೆ ಮತ್ತು ಸಿಸೇರಿಯನ್ ಮತ್ತಿತರ ಶಸ್ತ್ರಚಿಕಿತ್ಸೆಗಳನ್ನು ನಡೆಸಲು ಅನುಕೂಲವಾಗುವಂತೆ ಸುಸಜ್ಜಿತವಾದ ಕೊಠಡಿ ಮೊದಲಾದ ಪ್ರಸವ ಸಂಬಂಧವಾದ ಸೇವೆಗಳು ಲಭ್ಯವಾಗುವುದು ಅಗತ್ಯ.

ಮಹಿಳೆಯರು ಗರ್ಭಾವಸ್ಥೆ ಮತ್ತು ಪ್ರಸವ ಕಾಲದಲ್ಲಿ ಸಾಯುತ್ತಲೇ ಇರುವುದಕ್ಕೆ ಮತ್ತೊಂದು ಮುಖ್ಯ ಕಾರಣವೆಂದರೆ, ಅವರ ಕೆಳಮಟ್ಟದ ಆರ್ಥಿಕ ಪರಿಸ್ಥಿತಿ ಮತ್ತು ಅಧಿಕಾರರಹಿತತೆ ಎನ್ನಲಾಗಿದೆ. ಇವು ಅವರ ಶಿಕ್ಷಣ ಮತ್ತು ಆರೋಗ್ಯ ರಕ್ಷಣೆಗಳಿಗೆ ಮಿತಿಯನ್ನೊಡ್ಡುತ್ತವೆ. ಇದರಿಂದಾಗಿಯೇ, ಮಕ್ಕಳಿಗೆ ಜನ್ಮ ನೀಡುವ ತಮ್ಮ ಆರೋಗ್ಯ ಮತ್ತು ಪೌಷ್ಠಿಕತೆಗಳಿಗೆ ಸಂಬಂಧಿಸಿದಂತೆ ಉತ್ತಮ ನಿರ್ಧಾರಗಳನ್ನು ತೆಗೆದುಕೊಳ್ಳಲು ಅವರಿಂದ ಸಾಧ್ಯವಾಗುವುದಿಲ್ಲ. ಅದಕ್ಕೆ ಅಗತ್ಯವಾದ ಮಾಹಿತಿಯ ಕೊರತೆ ಅವರಲ್ಲಿರುತ್ತದೆ. ತಾಯಿಯ ಮರಣದಿಂದ ಬದುಕುಳಿದ ಮಗುವಿನ ಬದುಕು ಕಷ್ಟಕರವಾಗಿರುತ್ತದೆ. ತಾಯಿಯ ಮಮತೆಯ ಆರೈಕೆಯಿಂದ ಬದುಕುವ ಸಾಧ್ಯತೆ ಬಹಳಷ್ಟು ಕಡಿಮೆಯಾಗುತ್ತದೆಂದು ಅಧ್ಯಯನಗಳು ಹೇಳುತ್ತವೆ.

ಯುನಿಸೆಫ್ ವರದಿಯ ಪ್ರಕಾರ, ಭಾರತದಲ್ಲಿ ಗರ್ಭಾವಸ್ಥೆ ಮತ್ತು ಪ್ರಸವಕ್ಕೆ ಸಂಬಂಧಿಸಿದ ಕ್ಲಿಷ್ಟತೆಗಳಿಂದ ಪ್ರತಿ ಐದುನಿಮಿಷಗಳಿಗೆ ಒಬ್ಬ ಮಹಿಳೆ ಮರಣ ಹೊಂದುತ್ತಾಳೆನ್ನಲಾಗಿದೆ. ಅಂತಾರಾಷ್ಟ್ರೀಯ ಸಂಸ್ಥೆಗಳ ಸಹಯೋಗದೊಂದಿಗೆ ಕೇಂದ್ರ ಸರಕಾರ ನಡೆಸುತ್ತಿರುವ ಸತತ ಪ್ರಯತ್ನಗಳು ಕೂಡ ಹೆಚ್ಚಿನ ಫಲ ನೀಡಿಲ್ಲ ದಿರುವುದನ್ನು ನಾವು ಗಮನಿಸಬಹುದಾಗಿದೆ. ಅಸ್ಸಾಂ, ಮಧ್ಯಪ್ರದೇಶ ಮತ್ತು ಉತ್ತರ ಪ್ರದೇಶಗಳಲ್ಲಿ ಒಂದು ಲಕ್ಷ ಜನನಕ್ಕೆ ಐನೂರ ನಲವತ್ತು ಮಂದಿ ತಾಯಂದಿರು ಮರಣಿಸಿದರೆ, ಇದೇ ಪರಿಸ್ಥಿತಿ ಒರಿಸ್ಸಾ, ರಾಜಾಸ್ಥಾನ, ಪಶ್ಚಿಮ ಬಂಗಾಳ ಮತ್ತು ಬಿಹಾರಗಳಲ್ಲಿವೆ.

ತಾಯಂದಿರ ಮರಣ ಸಂಖ್ಯೆಗಳು ಮಾತ್ರವೇ ದುರಂತದ ಸಂಪೂರ್ಣ ಚಿತ್ರವನ್ನು ಕೊಡುವುದಿಲ್ಲ. ವಾಸ್ತವದಲ್ಲಿ, ಶಿಶುಜನನಕ್ಕೆ ಸಂಬಂಧಿಸಿದ ತೊಂದರೆಗಳಿಂದ ಒಬ್ಬ ಮಹಿಳೆ ಸತ್ತರೆ, ಇತರ ಮೂವತ್ತು ಮಂದಿ ಗಾಯ, ಸೋಂಕು ಮತ್ತು ನ್ಯೂನತೆಗಳಿಂದ ಬಳಲುತ್ತಾರೆ. ಅವುಗಳಲ್ಲಿ ಹೆಚ್ಚಿನವುಗಳಿಗೆ ಚಿಕಿತ್ಸೆಯನ್ನೇ ನಡೆಸುವುದಿಲ್ಲ ಅಥವಾ ದೊರಕುವುದಿಲ್ಲ. ಒಟ್ಟಿನಲ್ಲಿ ಅಭಿವೃದ್ಧಿಶೀಲ ಜಗತ್ತಿನ ಮಹಿಳೆಯರಲ್ಲಿ ಕಾಲುಭಾಗವಾದ ಮುನ್ನೂರು ದಶಲಕ್ಷ ಮಂದಿ ಇಂದು ಗರ್ಭಾವಸ್ಥೆ ಮತ್ತು ಶಿಶು ಜನನಗಳ ಸಮಸ್ಯೆಗಳನ್ನೆದುರಿಸುತ್ತಿದ್ದಾರಲ್ಲದೆ ಅವು ಅವರ ಬದುಕನ್ನು ಆಳವಾಗಿ ತಟ್ಟಿವೆ ಎನ್ನಲಾಗಿದೆ.

## ಪಟ್ಟಿ : 1

### ಪ್ರಸವ ಮತ್ತು ಗರ್ಭಾವಸ್ಥೆಗಳಿಗೆ ಸಂಬಂಧಿಸಿದ ಕಾರಣಗಳಿಂದಾಗಿ ನಿರೀಕ್ಷಿತ ತಾಯಂದಿರ ಮರಣದ ಶೇಕಡಾವಾರು ವಿಂಗಡಣೆ

| ಕಾರಣಗಳು | 1989 | 1990 | 1991 | 1992 | 1993 | 1994 | 1995 | 1996 | 1997 | 1998 |
|---|---|---|---|---|---|---|---|---|---|---|
| ಗರ್ಭಪಾತ | 10.9 | 11.8 | 10.8 | 13.7 | 11.7 | 12.6 | 17.6 | 9.0 | 8.7 | 12.4 |
| ಟಾಕ್ಸೀಮಿಯ | 7.9 | 15.2 | 8.8 | 12.6 | 12.8 | 13.1 | 7.9 | 11.5 | 10.5 | 9.9 |
| ರಕ್ತಹೀನತೆ | 20.3 | 19.4 | 19.9 | 19.6 | 20.3 | 19.3 | 17.0 | 15.8 | 15.7 | 23.7 |
| ಗರ್ಭಾವಸ್ಥೆಯ ರಕ್ತಸ್ರಾವ ಮತ್ತು ಪ್ಯೂಪೆರಿಯಂ | 23.8 | 23.7 | 19.5 | 25.2 | 22.6 | 23.7 | 28.9 | 26.4 | 24.7 | 23.3 |
| ಮಗುವಿನ ಅಸಹಜ ಸ್ಥಿತಿ | 10.9 | 7.1 | 11.6 | 8.5 | 5.5 | 6.4 | 4.0 | 9.6 | 11.7 | 7.4 |
| ಪ್ಯೂಪೆರಿಯಲ್ ಸೆಪ್ಸಿಸ್ | 5.9 | 8.1 | 12.7 | 11.5 | 12.5 | 10.6 | 8.5 | 14.0 | 10.2 | 9.5 |
| ವರ್ಗೀಕರಿಸಲಾಗದವು | 20.3 | 14.7 | 16.7 | 8.9 | 14.6 | 14.2 | 14.1 | 13.7 | 18.4 | 13.8 |

**ಮೂಲ :** ಸರ್ವೆ ಆಫ್ ಕಾಸಸ್ ಆಫ್ ಡೆತ್ಸ್, ಆಫೀಸ್ ಆಫ್ ರಿಜಿಸ್ಟಾರ್ ಜನರಲ್, ಭಾರತ

**ಸೂಚನೆ :** 1998ರಲ್ಲಿ 2059 ಪ್ರಾಥಮಿಕ ಆರೋಗ್ಯ ಕೇಂದ್ರಗಳಿರುವ ಗ್ರಾಮಗಳನ್ನು ಸಮೀಕ್ಷೆಗೊಳಪಡಿಸಿದಾಗ 40,351 ಮರಣಗಳು ವರದಿಯಾಗಿದ್ದವು.

ಇದಕ್ಕೆ ಒಂದೇ ಒಂದು ಪರಿಣಾಮಕಾರಿ ಮಾರ್ಗವೆಂದರೆ, ಪ್ರಸವ ಸಂಬಂಧೀ ಆರೈಕೆಯ ತುರ್ತು ಸೌಲಭ್ಯಗಳನ್ನೊದಗಿಸುವುದು ಎನ್ನುವುದು ಯುನಿಸೆಫ್‌ನ ಅಭಿಪ್ರಾಯ. ಈ ನಿಟ್ಟಿನಲ್ಲಿ ಸರಕಾರಗಳು ಎಷ್ಟರಮಟ್ಟಿಗೆ ತಮ್ಮ ಕಾರ್ಯಾಚರಣೆಗಳನ್ನು ತೀವ್ರಗೊಳಿಸ ಬಲ್ಲವೆನ್ನುವುದು ನಮ್ಮ ಮುಂದಿನ ಪ್ರಶ್ನೆಯಾಗಿದೆ. ಮುಂದಿನ ದಿನಗಳಲ್ಲಿ ತಾಯಂದಿರ ಮರಣದ ಬದಲಾದ ಚಿತ್ರವನ್ನು ಕಾಣಬೇಕೆಂದರೆ :

* ಗ್ರಾಮೀಣ ಪ್ರದೇಶಗಳಲ್ಲಿ ಸೇವೆ ಸಲ್ಲಿಸುವ ದಾದಿಯರು, ಸಮುದಾಯ ಆರೋಗ್ಯ ಕೇಂದ್ರಗಳ ದಾದಿಯರು, ಪ್ರಸವಾವಧಿಯಲ್ಲಿ ನೆರವು ನೀಡಬಲ್ಲ ಅರೆವೈದ್ಯಕೀಯ (Paramedical) ಸಿಬ್ಬಂದಿಗಳಿಗೆ ತುರ್ತು ಆರೈಕೆ ಮತ್ತು ಜೀವರಕ್ಷಕ ಕೌಶಲಗಳನ್ನು ಕುರಿತಂತೆ ತರಬೇತಿ ನೀಡುವುದು.
* ಗರ್ಭಾವಸ್ಥೆಯಲ್ಲಿ ಅಪಾಯದ ಸೂಚನೆಗಳನ್ನು ಗುರುತಿಸಲು ಸಾಧ್ಯವಾಗುವಂತೆ ಸಮುದಾಯಗಳಿಗೆ ಸಂಬಂಧಿಸಿದ ಶಿಕ್ಷಣ ನೀಡುವುದು.
* ತುರ್ತುಪರಿಸ್ಥಿತಿಯಲ್ಲಿರುವ ಮಹಿಳೆಯರನ್ನು ಗ್ರಾಮೀಣ ಪ್ರದೇಶಗಳಿಂದ ಆರೋಗ್ಯ ಕೇಂದ್ರಗಳಿಗೆ ಕೊಂಡೊಯ್ಯಲು ಅಗತ್ಯವಾದ ತುರ್ತುವಾಹನದ ಸೌಲಭ್ಯವನ್ನೊದಗಿಸುವುದು.
* ಪ್ರಸವಕಾಲದಲ್ಲಿ, ಮುಂದುವರಿದ ದೇಶಗಳಲ್ಲಿರುವಂತೆ ಗರ್ಭಿಣಿ ಮಹಿಳೆಯ ಗಂಡನಿಗೆ ಮಗುವಿನ ಜನನ ಕ್ರಿಯೆಯನ್ನು ವೀಕ್ಷಿಸುವ ಅವಕಾಶವನ್ನು ನೀಡಬೇಕು. ಆ ಮೂಲಕ ಜನನಕಾಲದಲ್ಲಿ ಹೆಣ್ಣಿಗಾಗುವ ತೊಂದರೆಗಳಲ್ಲದೆ ಅವಳು ಅನುಭವಿಸುವ ನೋವಿನ ಕಲ್ಪನೆಯಾದರೂ ಅವನಿಗೆ ನಿಲುಕುವಂತೆ ಮಾಡಬೇಕು.
* ಸುರಕ್ಷಿತ ತಾಯ್ತನಕ್ಕಾಗಿ ಅಗತ್ಯ ಸೌಲಭ್ಯಗಳು ಎಲ್ಲೆಡೆ ಲಭ್ಯವಾಗುವುದು ಮೊದಲ ಆದ್ಯತೆಯಾಗಬೇಕು. ಇದಕ್ಕಾಗಿ ಸಮುದಾಯ - ಸಂಘಟನೆಗಳು ಸಕ್ರಿಯವಾಗಿ ತೊಡಗಿಸಿಕೊಳ್ಳುವಂತಾಗುವುದು ಇಂದಿನ ತುರ್ತು ಅಗತ್ಯ. ಇದರ ಹೊರತಾಗಿ ಪ್ರಸ್ತುತ ಸಮಸ್ಯೆ ಹೀಗೇ ಮುಂದುವರಿದರೆ ಅಚ್ಚರಿಪಡಬೇಕಾಗಿಲ್ಲ.

*ಪರಾಮರ್ಶನೆಗಾಗಿ*

* ಹ್ಯೂಮನ್ ಟಚ್ : Vol. 3, ನಂ 7, ಜುಲೈ, 2006
* ವಿಮೆನ್ ಅಂಡ್ ಮೆನ್ ಇನ್ ಇಂಡಿಯ : 2004 ಭಾರತ ಸರ್ಕಾರ

## ಎರಡು ಬಿಂದುಗಳು

ನಾನು ಶೂನ್ಯದಲ್ಲಿ ಸಿಕ್ಕಿಹಾಕಿಕೊಂಡ ನಿಶ್ಚಲವಾದ ನಿಶ್ಶಬ್ದ ಅಂದುಕೊಂಡೆ. ನನಗೆ ಯಾರೂ ಇಲ್ಲ ಅಂದುಕೊಂಡೆ. ನಾನು ಯಾರಿಗೂ ಏನೂ ಆಗಿಲ್ಲ ಅಂದುಕೊಂಡೆ. ಹಾಗೆ ಅಂದುಕೊಂಡೂ ಅಂದುಕೊಂಡೂ ಖೇದಪಟ್ಟೆ, ಹಾಗೆ ಭಾವಿಸಿ ರೋದಿಸಿದೆ. ಇಷ್ಟು ದಿನಗಳ ನಂತರ ನನಗೆ ಈಗ ತಾನೇ ತಿಳಿಯಿತು; ನನ್ನನ್ನು ಪದೇ ಪದೇ ಸ್ಮರಿಸುತ್ತ, ಅದೇ ಕೆಲಸವಾಗಿ ಧ್ಯಾನಿಸುತ್ತಾ, ನಾನೇ ಸರ್ವಸ್ವ ಎಂದು ಭಾವಿಸುತ್ತ, ನನಗಾಗಿಯೇ ತಪಿಸುತ್ತ, ನನಗೋಸ್ಕರವೇ ಜೀವಿಸುತ್ತಿರುವವರು ಒಬ್ಬರಿದ್ದಾರೆಂದು ನನಗೆ ಈಗ ತಾನೇ ತಿಳಿಯಿತು.

ಆ ಪರಮಸತ್ಯ ತಿಳಿದಮೇಲೆ ಈ ವಿಸ್ತಾರಜಗತ್ತು ಅರಳಿದ ಸುಲಲಿತ ಮಂಜುಳನಾದದಂತೆ ಬದಲಾಯಿಸಿದ ಹಾಗೆ ಎನಿಸುತ್ತಿದೆ.

* * *

ನನ್ನ ಸುತ್ತಲಿರುವ ಪ್ರಪಂಚವನ್ನು ನಾನು ಬಯಸುವ ಜಗತ್ತಿನಂತೆ ಮಾರ್ಪಡಿಸೋಣ ಅಂದುಕೊಂಡೆ. ಅಂದುಕೊಂಡ ನಂತರ ಆ ಬದಲಾದ ಪ್ರಪಂಚ ಹೇಗೆ ಇರುತ್ತದೆ ಎಂಬುದನ್ನು ನನ್ನ ಸುತ್ತ ಇರುವವರಿಗೆ ತಿಳಿಯಪಡಿಸಲು ಪ್ರಾರಂಭಿಸಿದೆ. ಹಾಗೆ ಮಾಡುವ ಮೊದಲು ನಾನು ಅವರ ಬಳಿಗೆ ಹೋದೆ, ಅವರ ನಡುವೆ ಸೇರಿದೆ. ಅವರಿಗೆ ಅರ್ಥವಾಗುವ ಭಾಷೆಯಲ್ಲಿ, ಅವರಿಗೆ ಇಷ್ಟವಾಗುವ ಶೈಲಿಯಲ್ಲಿ ಹೇಳಲು ಪ್ರಾರಂಭಿಸಿದೆ.

ಅವರು ಬದಲಾಗುತ್ತಾರೋ ಇಲ್ಲವೋ ನನಗೆ ತಿಳಿಯದು. ನಾನು ಮಾತ್ರ ಅವರಂತೆಯೇ ಬದಲಾಯಿಸಿ ಬಿಟ್ಟೆ.

*ತೆಲುಗು ಮೂಲ : **ಡಾ. ರಾವೂರಿ ಭಾರದ್ವಾಜ;** ಅನುವಾದ : **ಡಾ. ಎಚ್.ಎಸ್. ಸುಜಾತಾ***

# ಸಂತೆಗೆ ಸೇರಿದ್ದಾರೆ ಜನ

● ಚಂದ್ರಿಕಾ

ಉರಿವ ಭಟ್ಟಿ ಎದುರು
ಕುಳಿತ ಹುಡುಗ ಸುಟ್ಟ ತನ್ನ ಕೈಗಳನ್ನು
ಲೆಕ್ಕಿಸದೆ
ಮಂಡಕ್ಕಿಯ ಜರಡಿಯಾಡಿಸುತ್ತಿದ್ದಾನೆ
ಸೇರು ಮೂಟೆ ವ್ಯಾಪಾರ ಭರಾಟೆ
ಮೂಲೆಯಲ್ಲಿ ಸೂಟ್‌ಕೇಸನ್ನು
ಬಿಚ್ಚಿ

ಕಾಲಂದಿಗೆ ಕಡಗ ಚೈನುಗಳ ಹರಡಿ
ಕುಳಿತಿದ್ದಾಳೆ ಮುದುಕಿ
ನಡೆಯಲಾಗದ ಹುಡುಗಿಗೆ ಸದಾ ಗೆಜ್ಜೆಯದ್ದೇ ಚಿಂತೆ
ಅಮ್ಮ ತೊಡಿಸು ಎಂದು ಕಾಡಿಸುತ್ತಾಳೆ
ಸಂತೆಗೆ ಸೇರಿದ್ದಾರೆ ಜನ

ನಕ್ಕಾರ ಹೊಕ್ಕಳು ಹೂವರಳಿ
ಎದೆಯ ತಿದಿಗೆ ಮತ್ತಷ್ಟು
ಹುಡಿಗೆದರಿ
ಕೆಂಪಾದ ಕೆನ್ನೆಗೆ ರಂಗು

ಸೋರಿದ ನಗುವಿಗೆ
ಸಲ್ಲದ ಮಾತಿಗೆ
ಮಾತೇ ಇಲ್ಲದೆ ಮುಂದೆ ಸಾಗುವ ಹೆಣ್ಣು
ಕೈಯಲ್ಲಿ ಬುಟ್ಟಿ ಹಿಡಿದಿದ್ದಾಳೆ
ಸಂತೆಗೆ ಸೇರಿದ್ದಾರೆ ಜನ

ಕಣ್ಣ ಜಾಡ ಹಿಡಿದು
ಮೋಡದ ಮರೆಯಲ್ಲಿ ಮಿಂಚಿದಾಗ
ಮೊಗ್ಗೆಯಾದ ಛತ್ರಿಗಳು ಅರಳಿ
ಜಾಲಿಮುಳ್ಳು ಕಾಲಿಗೆ ನಾಟಿ
ಕೀತು ಹುಣ್ಣಾದಾಗ
ಕಳ್ಳಿಹಾಲಿಗಾಗಿ ಹುಡುಕಾಟ
ಕೊಳವೆ ನೀರಿನ ಪಾಚಿದಡಗಳ ನಡುವೆ
ಹುಡುಗರು ತಾವರೆಗಾಗಿ ಕಾದಾಡುತ್ತಾರೆ
ಅವರ ಮೈ ಪೂರಾ ಗಬ್ಬು ವಾಸನೆ
ಕೊಳ್ಳಲೇ ಬೇಕು ಎಂಬ ಹಠದಲ್ಲಿ
ಗುಂಪು ಗುಂಪಾಗಿ ಜನಸೇರಿದ್ದಾರೆ ಸಂತೆಯಲ್ಲಿ
ಕಾಗೆ ಕಚ್ಚಿದ ಹಣ್ಣು
ತೊಡೆ ಮಡುಕುಗಳಲ್ಲಿ
ಕೂತ ಕೊಬ್ಬು
ಏಳಲಾಗದೆ ಒದ್ದಾಡುವ ಡುಬ್ಬು ದೇಹ
ಚೌಕಾಸಿ ಮಾತ್ರ ಮಾಡಬೇಡ

ನೆಲದ ಆಸರೆಯಿಲ್ಲದೆ ಹೊತ್ತಿದ
ಗಿಡಗಳಿಗೆ
ಆಸರೆಯಾಗುವ ಗಾಳಿಯಲ್ಲಿನ ತೇವಮಣ್ಣು
ಹೊತ್ತು ಕರಗುತ್ತಿದ್ದಂತೆ
ಕೊಳ್ಳುವ ಉತ್ಸಾಹವನ್ನು ಮರೆಮಾಡಿ
ಮಂದಿ ಮರೆಯಾಗುತ್ತಿದ್ದಾರೆ

ಕತ್ತಲೆಯ ಅಂಚಿನಲ್ಲಿ
ಹೊಂಚಡಗುವಂತೆ ಸೂರ್ಯ ಮುಳುಗುತ್ತಿದ್ದಾನೆ.

# ಸಹೃದಯ ಓದುಗರಲ್ಲಿ

ಯಾವುದೇ ಚಳವಳಿ ಸ್ವಾಯತ್ತತೆಯನ್ನು ಉಳಿಸಿಕೊಂಡಾಗ ಮಾತ್ರ ಶಕ್ತಿಯುತವಾಗಲು ಸಾಧ್ಯ. ಮಾನಸ ಸ್ವಾಯತ್ತ ಪರಿಕಲ್ಪನೆಯನ್ನು ತಾನಿಡುವ ಪುಟ್ಟ ಹೆಜ್ಜೆಯಲ್ಲೂ ಜಾರಿಗೆ ತರಲು ಪ್ರಯತ್ನಿಸಿದೆ. ಇದುವರೆಗೂ ಮಾನಸದ ಸಭೆಗೆ ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳು ಆಸರೆಯಾಗಿತ್ತು. ಮಾನಸಕ್ಕೆ ತನ್ನದೇ ಆದ ಒಂದು ಕಛೇರಿ ಮಾಡಬೇಕೆಂಬ ಕನಸು ಈಗ ನನಸಾಗಿದೆ. ಈ ಕೆಳಗಿನ ವಿಳಾಸದಲ್ಲಿ ಮಾನಸಕ್ಕೆ ಒಂದು ಪುಟ್ಟ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದೇವೆ. ಬಾಡಿಗೆ 1600/-. ಇದು ನಮಗೆ ಹೊರೆಯಾದರೂ, ಮಾನಸ ಸದಸ್ಯರಿಂದ ಸಂಗ್ರಹಿಸುತ್ತಿದ್ದೇವೆ. ಸಹೃದಯರು ಬಾಡಿಗೆ ಹಣವನ್ನು ಕೊಡುಗೆಯಾಗಿ ನೀಡುವುದರ ಮೂಲಕ ನಮ್ಮ ಈ ಪ್ರಯತ್ನಕ್ಕೆ ನೆರವು ನೀಡಬೇಕೆಂದು ಕೋರುತ್ತೇವೆ. ಕೊಡುಗೆ ನೀಡಿದವರ ಹೆಸರುಗಳನ್ನು ಮಾನಸದಲ್ಲಿ ಪ್ರಕಟಿಸಲಾಗುವುದು.

**ನೀವು ಮಾನಸಕ್ಕೆ ಹೀಗೆ ಸಹಕರಿಸಬಹುದು :**

- ಪತ್ರಿಕೆಗೆ ಚಂದಾದಾರರಾಗುವುದರ ಮೂಲಕ
- ಮಾನಸ ವೇದಿಕೆಗೆ ಸದಸ್ಯರಾಗುವುದರ ಮೂಲಕ
- ಕವನ, ಲೇಖನ, ವರದಿ, ಮುಂತಾದವುಗಳನ್ನು ಕಳಿಸಿಕೊಡುವುದರ ಮೂಲಕ
- ಪತ್ರಿಕೆಯನ್ನು ಪ್ರಾಯೋಜಿಸುವುದರ ಮೂಲಕ

ಸಂಪಾದಕ ಮಂಡಳಿ

REGD. No. : MAG(3) NPP/399(A) / 2006-07
KA/BGS/2074/2007-09

*Posted on 9th of every month*
*at Chamarajpet Post Office*

Registered
Magazine



97. Pushpa H S
No.95, Y V Annaiah Road
Yalachenahalli
J P Nagar P O
Bangalore 560 078

ವಿಳಾಸ :

ನಮ್ಮ ಮಾನಸಿ
34/1, 2ನೇ ಕ್ರಾಸ್, ಆಜಾದ್ ನಗರ,
ಚಾಮರಾಜಪೇಟೆ, ಬೆಂಗಳೂರು – 560 018

Edited and owned by H.S. Rajeshwari, 34/1, 2nd Cross, Ajaad Nagar, Chamarajpet, Bangalore - 560 018;
Printed at ILA Mudrana, No. 36, 40 Ft. Road, Raghavanagar, NTY Layout, B'lore - 26. ✆ : 26757159, 32715773